KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೮, ೨೦೦೬ (ಜೇಷ್ಠ ೧೮, ಶಕ ವರ್ಷ ೧೯೨೮) | ಸಂಚಿಕೆ ೨೩ |
|---|---|---|


## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕರ್ನಾಟಕ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಕಾರ್ಯಪಾಲಕ ಇಂಜಿನೀಯರವರ ಕಚೇರಿ,**
**ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ**
**ಟೆಂಡರ್ ಪ್ರಕಟಣೆ:ಸಂಖ್ಯೆ: 10/06-07/ ದಿನಾಂಕ: 24ನೇ ಮೇ 2006**

ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಅರ್ಹ ಗುತ್ತಿಗೆದಾರರಿಂದ/ನೊಂದಾಯಿತ ಪೂರೈಕೆದಾರರಿಂದ ಈ ಕೆಳಕಂಡ ಏತ ನೀರಾವರಿ ಯೋಜನೆಗಳ ಕಾಮಗಾರಿಗಳಿಗೆ ವಿವಿಧ ಅಶ್ವ ಶಕ್ತಿಯ ಮೋಟಾರು ಮತ್ತು ಪಂಪಿಂಗ್ ಮೆಷಿನರಿ ಯಂತ್ರಗಳನ್ನು ಹಾಗೂ ತಯಾರಿಸಿದ ಉಪಕರಣಗಳನ್ನು ಒದಗಿಸಿ, ಅಳವಡಿಸಿ, ವಿದ್ಯುದ್ದೀಕರಣಗೊಳಿಸಿ, ಪರಿಕ್ಷಾಚಾಲನೆ ಮಾಡಿಕೊಳ್ಳಲು ಐಟಂವಾರು ಟೆಂಡರಗಳನ್ನು ಸ್ವಿಪತ್ರಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆದ್ಯಾದೇಶ-1999, 2000 ಮತ್ತು ಆ್ಯಕ್ಟ್- 2000 ರ ಪ್ರಕಾರ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

1. ಟೆಂಡರ್ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 28.06.2006 ಎ ಸಂಜೆ 5.00 ಗಂಟೆಯವರೆಗೆ.
2. ಖಾಲಿ ಟೆಂಡರ್- ಫಾರಂಗಳನ್ನು ದಿನಾಂಕ: 05.07.2006 ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ: 12.07.2006 ರ ಸಂಜೆ 4.00 ಗಂಟೆಯೊಳಗೆ ಸಲ್ಲಿಸುವುದು.

ಸಾಧ್ಯವಾದರೆ ಅಂದೇ ಸಂಜೆ 5.30 ಗಂಟೆಗೆ ಹಾಜರಿರುವ ಸರಬರಾಜುದಾರರು ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ಟೆಂಡರ್ ತೆರೆಯಲಾಗುವುದು.ತಪ್ಪಿದಲ್ಲಿ ನಂತರದ ದಿನಗಳಲ್ಲಿ ಟೆಂಡರಿನಲ್ಲಿ ಭಾಗವಹಿಸಿದ ಗುತ್ತಿಗೆದಾರರಿಗೆ ತಿಳುವಳಿಕೆ ಪತ್ರ ಮುಖೇನ ತಿಳಿಸಿ ಟೆಂಡರ್ ತೆರೆಯಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂಗಳಲ್ಲಿ) | ಖಾಲಿ ಟೆಂಡರ್ ಫಾರಂ ಬೆಲೆ (ತೆರಿಗೆ ಸೇರಿ) (ರೂಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಲಮಿತಿ (ಮಳೆಗಾಲ ಸೇರಿ) |
|---|---|---|---|---|---|---|
| 1. | ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು ದಬ್ಬಣಗದ್ದೆ ಏತ ನೀರಾವರಿ ಯೋಜನೆ.ಯಡಿಯಲ್ಲಿ ಪಂಪಿಂಗ್ ಯಂತ್ರೋಪಕರಣಗಳನ್ನು ಪೂರೈಸಿ ಮತ್ತು ಅಳವಡಿಸಿ ವಿದ್ಯುದೀಕರಣದೊಂದಿಗೆ ಚಾಲನೆ ಮಾಡುವ ಕಾಮಗಾರಿ. (ನಬಾರ್ಡ್ ಅಡಿಯಲ್ಲಿ) | 28=00 | 28000=00 | 3000=00 | ಅರ್ಹ ಗುತ್ತಿಗೆದಾರರಿಂದ /ನೊಂದಾಯಿತ ಪೂರೈಕೆದಾರರು | 6 ತಿಂಗಳು |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂಗಳಲ್ಲಿ) | ಖಾಲಿ ಟೆಂಡರ್ ಫಾರಂ ಬೆಲೆ (ತೆರಿಗೆ ಸೇರಿ) (ರೂಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಲಮಿತಿ (ಮಳೆಗಾಲ ಸೇರಿ) |
|---|---|---|---|---|---|---|
| 2. | ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು ದೊಡ್ಡಮಟ್ಟಿ ಏತ ನೀರಾವರಿ ಯೋಜನೆಯಡಿಯಲ್ಲಿ ಪಂಪಿಂಗ್ ಯಂತ್ರೋಪಕರಣಗಳನ್ನು ಒದಗಿಸಿ ಮತ್ತು ಅಳವಡಿಸಿ ವಿದ್ಯುದೀಕರಣದೊಂದಿಗೆ ಚಾಲನೆ ಮಾಡುವ ಕಾಮಗಾರಿ. (ನಬಾರ್ಡ ಅಡಿಯಲ್ಲಿ) | 20=00 | 20000=00 | 2000=00 | ಅರ್ಹ ಗುತ್ತಿಗೆದಾರರಿಂದ /ನೊಂದಾಯಿತ ಪೂರೈಕೆದಾರರು | 6 ತಿಂಗಳು |

**ಷರತ್ತುಗಳು:**

1. ಗುತ್ತಿಗೆದಾರರು ಈ ಹಿಂದೆ ಟೆಂಡರಿಗಿಡಲಾದ ಮೊತ್ತದ ಇದೇ ತರಹದ ಕಾಮಗಾರಿಗಳನ್ನು ಸಮರ್ಪಕವಾಗಿ ನಿರ್ವಹಿಸಿದ ಹಾಗೂ ಸಂಪೂರ್ಣವಾಗಿ ಪೂರ್ಣಗೊಳಿಸಿರುವ ಬಗ್ಗೆ ಸಂಬಂಧಪಟ್ಟ ಕಾರ್ಯಪಾಲಕ ಇಂಜಿನೀಯರ್‌ರವರಿಂದ ದೃಡೀಕರಿಸಿದ ವಿವರಗಳನ್ನು ಲಗತ್ತಿಸಬೇಕು.
2. ಸರಬರಾಜುದಾರರು ಸಾಮಾಗ್ರಿಗಳನ್ನು ಕಾಮಗಾರಿಯ ಸ್ಥಳಕ್ಕೆ ಪೂರೈಸಬೇಕು.
3. ಸರಬರಾಜು ಮಾಡಿದ ಮೋಟಾರು ಮತ್ತು ಪಂಪಿಂಗ್ ಮೆಷಿನರಿ ಯಂತ್ರಗಳು ಐ.ಎಸ್.ಐ.-1911ಕ್ಕೆ ಅನುಗುಣವಾಗಿರುವುದು ದರ ನಮೂದಿಸುವಾಗ ಕೆ.ಎಸ್.ಟಿ.ಯನ್ನು ಪ್ರತ್ಯೇಕವಾಗಿ ನಮೂದಿಸುವುದು ಹಾಗೂ ಕರ್ನಾಟಕ ರಾಜ್ಯ ಮಾರಾಟ ತೆರಿಗೆ ನೊಂದಣಿಯಾಗಿರಬೇಕು.
4. ಮೆಷಿನರಿ ಗುಣಮಟ್ಟ ದೃಡೀಕರಣ ಪತ್ರ ಸಲ್ಲಿಸುವುದು ಹಾಗೂ ಸಂಬಂಧಿಸಿದ ಇಂಜಿನಿಯರ್‌ರವರ ಸಮ್ಮುಖದಲ್ಲಿ ಪ್ರತಿ ಮೆಷನರಿ ಯಂತ್ರಗಳನ್ನು ಪರಿಶೀಲಿಸುವುದು.
5. ಟೆಂಡರಗಳನ್ನು ಯಾವುದೇ ಕಾರಣವಿಲ್ಲದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಇಲಾಖೆಗೆ ಸಂಬಂದಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.
6. ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೊಂದಣಿ ಪ್ರಮಾಣ ಪ್ರತಿ ಲಗತ್ತಿಸತಕ್ಕದ್ದು.
7. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೊಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು. ಸತತವಾಗಿ 3 ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
8. ಕಾಮಗಾರಿಯನ್ನು ಉಪಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
9. ಈ ವಿಭಾಗದಲ್ಲಿ ಹಿಂದೆ ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸದ ಗುತ್ತಿಗೆದಾರರಿಂದ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.
10. ನಿಗದಿತ ಇ.ಎಂ.ಡಿ ಯನ್ನು ಕಡ್ಡಾಯವಾಗಿ ರಾಷ್ಟ್ರೀಕೃತ ಬ್ಯಾಂಕಿನ ಡಿಡಿ/ಪೇ ಆರ್ಡರ್/ಎಫ್‌ಡಿಆರ್ ಹಾಗೂ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಕಾರ್ಯಪಾಲಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರಿಗೆ ಟೆಂಡರ ಜೊತೆಗೆ ಕಡ್ಡಾಯವಾಗಿ ಒತ್ತೆ ಇಟ್ಟಿರಬೇಕು ಯಾವುದೇ ಕಾರಣಕ್ಕೂ ಬ್ಯಾಂಕ್ ಗ್ಯಾರಂಟಿಯನ್ನು ಪರಿಗಣಿಸುವುದಿಲ್ಲ.
11. ರಾಜ್ಯ ಮಾರಾಟ ತೆರಿಗೆಯಲ್ಲಿ ನೊಂದಣಿ ಸೂಚಿಸಿರುವ ಬಗ್ಗೆ ನೊಂದಣಿ ಪತ್ರದ ಪ್ರತಿ ಹಾಗೂ ಆದಾಯ ತೆರಿಗೆ ತೀರುವಳಿ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.
12. ಟೆಂಡರ್‌ದಾರರು, ಕೆ.ಪಿ.ಟಿ.ಸಿ.ಎಲ್. ಯಿಂದ ಪರವಾನಿಗೆ ಗುತ್ತಿಗೆದಾರರಿಂದ ವಿದ್ಯುತೀಕರಣವನ್ನು ನಿರ್ವಹಿಸುವುದು.
13. ಎಲ್ಲಾ ಷರತ್ತುಗಳು ಟೆಂಡರ ನೋಟಿಸ್ ಫಾರಂ ಪಿ.ಡಬ್ಲ್ಯೂ.ಜಿ-66 ಮತ್ತು 65 ರಂತೆ ಇರುತ್ತದೆ.
14. ಷರತ್ತುಗಳನ್ನೊಳಗೊಂಡ ಟೆಂಡರನ್ನು ಪರಿಗಣಿಸಲಾಗುವುದಿಲ್ಲ ಮತ್ತು ಯಾವುದೇ ಕಾರಣ ನೀಡದೆ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಇಲಾಖೆಗೆ ಸೇರಿರುತ್ತದೆ.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

ಕಾರ್ಯಪಾಲಕ ಇಂಜಿನಿಯರ್,
ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ

ಪಿ.ಆರ್. 299

## ಲೋಕೋಪಯೋಗಿ ಇಲಾಖೆ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

**ನಂ.ಇಎನ್‌ಹೆಚ್/ಚಿ/ಸ ಇ-1/ಟೆಂ.ಪ್ರ./ಬಿಆರ್‌ಜಿಎಸ್/06-07/520, ದಿನಾಂಕ: 20ನೇ ಮೇ 2006**

**ಟೆಂಡರ್ ಪ್ರಕಟಣೆ**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪತ್ರಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಮೂರನೇ ದರ್ಜೆ ಹಾಗೂ ಮೇಲ್ಪಟ್ಟ

ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂ ಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಮೊಹರಾದ ಲಕೋಟೆಯನ್ನು, ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 03.07.2006 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2 ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66 ರ ನಿಭಂದನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಭಂದನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಭಂದನೆಗೊಳಪಟ್ಟು ಸ್ವೀಕರಿಸಲಾಗುವುದು. ಟೆಂಡರನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮರುದಿನವನ್ನು ಕೆಲಸದ ದಿನವೆಂದು ಪರಿಗಣಿಸಲಾಗುವುದು.

ಟೆಂಡರು ಕರೆ ಸಂಖ್ಯೆ : ಮೊದಲನೆ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗಧಿಪಡಿಸಿದ ಮೊತ್ತ (ರೂ.ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) ಮೊತ್ತ (ರೂಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ +ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1. | ರಾಷ್ಟ್ರೀಯ ಹೆದ್ದಾರಿ- 206 ರ ತುಮಕೂರು- ಹೊನ್ನಾವರ ಸೆಕ್ಷನ್ ಕಿ.ಮೀ. 151.100 ರಲ್ಲಿ ಮೋರಿಯ ಮರು ನಿರ್ಮಾಣ ಕಾಮಗಾರಿ | ರೂ. 5.60 ಲಕ್ಷಗಳು | ರೂ. 12200 | 1000+ 12.5% ವ್ಯಾಟ್ | ಮೋರಿ ಮರು ನಿರ್ಮಾಣದ ಕಾಮಗಾರಿ | 5 ತಿಂಗಳು |

**ಷರತ್ತುಗಳು:**

1. ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗಧಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿಮ್ಯಾಂಡ್ ಡ್ರ್ಯಾಫ್ಟ್ ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು, ಗುತ್ತಿಗೆದಾರರು, ಗುತ್ತಿಗೆದಾರರ ನೊಂದಾವಣಿ ಪತ್ರದ ಪ್ರತಿ ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು), ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಸಮರ್ಪಕವಾಗಿ ಪೂರ್ಣಗೊಳಿಸಿರುವ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ನೀಡಲಾದ ಪ್ರಮಾಣ ಪತ್ರದ ಪ್ರತಿ. ಈ ಎಲ್ಲಾ ದಾಖಲೆಗಳನ್ನು ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2. ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಗುತ್ತಿಗೆದಾರರಿಂದ ಅರ್ಜಿ ಸ್ವೀಕರಿಸುವ ಹಾಗೂ ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ಕಡೆಯ ದಿನಾಂಕ: | 01.07.2006 (ಕಛೇರಿಯ ವೇಳೆಯಲ್ಲಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ: | 03.07.2006, ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಆ ನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಇ) | ಟೆಂಡರ್ ಗಳನ್ನು ತೆರೆಯುವ ದಿನಾಂಕ: | 03.07.2006, ಸಾಯಂಕಾಲ 5.00 ಅಥವಾ ಆ ನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |

**ಟೆಂಡರ್‌ಗಳಿಗೆ ಷರತ್ತುಗಳು:**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ.:ಎಫ್.ಡಿ.ಆರ್.: ಪೇ ಆರ್ಡರ್:ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ. ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ಅನ್ನು ಟೆಂಡರ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ. 66ಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಸ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೋಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀತಿಯ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು:ಸಂಸ್ಥೆಯವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ:ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ.: ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3. ಕಾಮಗಾರಿಗೆ ಅವಶ್ಯಕವಿರುವ ಎಲ್ಲಾ ಸಾಮಾಗ್ರಿಗಳನ್ನು ಯಂತ್ರೋಪಕರಣಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾ ವತಿಯಿಂದ ಯಾವುದೇ ಸಾಮಾಗ್ರಿಗಳು ಹಾಗೂ ಯಂತ್ರೋಪಕರಣಗಳನ್ನು ಒದಗಿಸಲಾಗುವುದಿಲ್ಲ.
4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ಎಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನುಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ಟೆಂಡರ್ ಜೊತೆಯಲ್ಲಿ ನಿಗಧಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
6. ಟೆಂಡರ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ಟೆಂಡರ್‌ಗಳನ್ನು ಅನರ್ಹಗೊಳಿಸಲಾಗುವುದು.
7. ಸಮಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ಟೆಂಡರಿನ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು:ಏಜೆನ್ಸಿಗಳು: ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸತಕ್ಕದ್ದು.
8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರ ಶೆಟ್ಟಿ**
ಕಾರ್ಯಪಾಲಕ ಅಭಿಯಂತರು,
ರಾ.ಹೆ.ವಿಭಾಗ, ಚಿತ್ರದುರ್ಗ.

ಪಿ.ಆರ್. 300

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
## ಟೆಂಡರ್ ಅಧಿಸೂಚನೆ
**ಸಂಖ್ಯೆ: ಸಿಆಸುಇ:200:ಡಿಇವಿ: 2005, ಬೆಂಗಳೂರು, ದಿನಾಂಕ: 24ನೇ ಮೇ 2006**

1. ಕರ್ನಾಟಕ ಸರ್ಕಾರ ಸಚಿವಾಲಯದ ಬಹು ಮಹಡಿ ಕಟ್ಟಡದ ಸಂಕೀರ್ಣದ ಆವರಣದಲ್ಲಿ ಸ್ಕೂಟರ್ ಮತ್ತು ಕಾರ್ ಸ್ಟ್ಯಾಂಡನ್ನು ಗುತ್ತಿಗೆ ಆಧಾರದ ಮೇಲೆ ನಡೆಸಲು ಅನುಭವಸ್ಥ ಗುತ್ತಿಗೆದಾರರಿಂದ ಮೊಹರು ಮಾಡಲ್ಪಟ್ಟ ಟೆಂಡರುಗಳನ್ನು ಕರೆಯಲಾಗಿದೆ.
2. ಟೆಂಡರ್ ಕವರಿನ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ಸ್ಕೂಟರ್ ಹಾಗೂ ಕಾರ್ ಸ್ಟ್ಯಾಂಡಿನ ಗುತ್ತಿಗೆ ಬಗ್ಗೆ" ಎಂದು ಬರೆದಿರತಕ್ಕದ್ದು ರೂ 10,000-00 ಇ.ಎಮ್.ಡಿ. ಮೊತ್ತಕ್ಕೆ ಡಿಮ್ಯಾಂಡ್ ಡ್ರಾಫ್ಟನ್ನು "ಸರ್ಕಾರದ ಅಧಿನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)" ಇವರ ಹೆಸರಿಗೆ ಬರೆದು, "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು" ಇವರಿಗೆ ಸಂಬೋಧಿಸಿ ಕಳುಹಿಸತಕ್ಕದ್ದು. ಡಿಮ್ಯಾಂಡ್ ಡ್ರಾಫ್ಟನ್ನು ಲಗತ್ತಿಸಿರದ ಟೆಂಡರಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 24.6.2006 ರ ಮಧ್ಯಾಹ್ನ 3.00 ಗಂಟೆಯವರೆಗೆ.
4. ಟೆಂಡರ್‌ನ್ನು ದಿನಾಂಕ:24.6.2006 ರ ಮಧ್ಯಾಹ್ನ 3.30 ಗಂಟೆಗೆ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ:23, ಇವರ ಕೊಠಡಿಯಲ್ಲಿ ತೆರೆಯಲಾಗುವುದು.
5. ಟೆಂಡರ್ ಸಲ್ಲಿಸುವವರು ಒಂದು ವರ್ಷದ ಹಣವನ್ನು ನಮೂದಿಸತಕ್ಕದ್ದು ಮತ್ತು ಈ ಮೊತ್ತವು ರೂ. 1,00,000/-ಕ್ಕಿಂತ (ರೂಪಾಯಿ ಒಂದು ಲಕ್ಷ ಮಾತ್ರ) ಕಡಿಮೆ ಇರಕೂಡದು.
6. ಯಶಸ್ವಿ ಟೆಂಡರ್‌ದಾರರು ಸೂಚಿಸಲಾಗುವ ಒಂದು ವರ್ಷದ ಟೆಂಡರ್ ಹಣವನ್ನು ಒಂದೇ ಕಂತಿನಲ್ಲಿ ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು. ಟೆಂಡರ್ ಹಣವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "0070-ಇತರ ಆಡಳಿತಾತ್ಮಕ ಸೇವೆಗಳು-ಸಿ-60-ಇತರ ಸೇವೆಗಳು-800-ಇತರ ಸ್ವೀಕೃತಿಗಳು -03-ಸಾಮಾನ್ಯ ಆಡಳಿತ ಸ್ವೀಕೃತಿಗಳು" ಗೆ ಪಾವತಿ ಮಾಡತಕ್ಕದ್ದು.
7. ಯಶಸ್ವಿ ಟೆಂಡರ್‌ದಾರರು ಪಾವತಿ ಮಾಡಿರುವ ಮುಂಗಡ ಹಣ ಮೊತ್ತವನ್ನು ಗುತ್ತಿಗೆ ಷರತ್ತುಗಳನ್ನು ನಿಭಾಯಿಸುವ ಸಲುವಾಗಿ ಸೆಕ್ಯೂರಿಟಿ ಡಿಪಾಸಿಟ್ ಆಗಿ ಪರಿಗಣಿಸಲಾಗುವುದು. ಆ ಯಶಸ್ವಿ ಟೆಂಡರ್‌ದಾರರ ಮುಂಗಡ ಹಣ ಮೊತ್ತವನ್ನು ಅವರು ಕೋರಿಕೆ ಸಲ್ಲಿಸಿದ ನಂತರ ಮರು ಪಾವತಿ ಮಾಡಲಾಗುವುದು.
8. ಯಾವುದಾದರೊಂದು ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸಲು ಅಥವಾ ಯಾವುದಾದರೊಂದು ಟೆಂಡರ್‌ನ್ನು ಒಪ್ಪಿಕೊಳ್ಳಲು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಪೂರ್ಣ ಹಕ್ಕಿದೆ. ಇದಕ್ಕಾಗಿ ಅವರು ಯಾವುದೇ ಕಾರಣಗಳನ್ನು ನೀಡಬೇಕಾಗಿಲ್ಲ.
9. ಈ ಗುತ್ತಿಗೆಯು ಈ ಕೆಳಗೆ ಕಾಣಿಸಿರುವ ನಿಬಂಧನೆಗಳಿಗೆ ಒಳಪಟ್ಟಿದೆ:
   1. ಈ ಗುತ್ತಿಗೆಯ ದಿನಾಂಕ:1.7.2006 ರಿಂದ ಒಂದು ವರ್ಷದ ಅವಧಿಗೆ ಇರುತ್ತದೆ.

2. ಗುತ್ತಿಗೆದಾರರು, ಸ್ಕೂಟರ್ ಮತ್ತು ಕಾರ್ ಸ್ಟ್ಯಾಂಡ್‌ನ್ನು ಬೆಳಿಗ್ಗೆ 8.00 ಗಂಟೆಯಿಂದ ರಾತ್ರಿ 8.00 ಗಂಟೆಯವರೆಗೆ ಎಲ್ಲಾ ದಿನಗಳಲ್ಲೂ ನಡೆಸತಕ್ಕದ್ದು. ಆವರಣವನ್ನು ಗುತ್ತಿಗೆದಾರರು ಸ್ವಚ್ಛವಾಗಿ ಇಡತಕ್ಕದ್ದು.
3. ಸರ್ಕಾರಿ ನೌಕರರಿಂದ ಸೈಕಲ್ ಒಂದಕ್ಕೆ ತಿಂಗಳೊಂದಕ್ಕೆ ರೂ. 2.00 ಹಾಗೂ ಮೋಟಾರು ಸೈಕಲ್,ಸ್ಕೂಟರ್, ಮೊಪೆಡ್ ಮತ್ತು ಕಾರುಗಳಿಗೆ ತಿಂಗಳೊಂದಕ್ಕೆ ರೂ. 8.00 ರಂತೆ ಶುಲ್ಕವನ್ನು ಗುತ್ತಿಗೆದಾರರು ವಸೂಲಿ ಮಾಡುವುದು. ಇತರರಿಂದ ಸೈಕಲ್ ಒಂದಕ್ಕೆ ಒಂದು ದಿನಕ್ಕೆ 1.00 ರೂ. ನಂತೆ ಹಾಗೂ ಮೋಟಾರು ಸೈಕಲ್, ಸ್ಕೂಟರ್, ಮೊಪೆಡ್‌ಗಳಿಗೆ ದಿನವೊಂದಕ್ಕೆ ರೂ. 2.00 ರಂತೆ ಮತ್ತು ಕಾರುಗಳಿಗೆ ರೂ. 3.00 ರಂತೆ ಶುಲ್ಕವನ್ನು ವಸೂಲಿ ಮಾಡತಕ್ಕದ್ದು.
4. ಈ ನಿಲ್ದಾಣಗಳಲ್ಲಿ ನಿಲ್ಲಿಸಿರುವ ವಾಹನಗಳಿಗೆ ಗುತ್ತಿಗೆದಾರರು ಟೋಕನ್‌ಗಳನ್ನು ನೀಡತಕ್ಕದ್ದು.
5. ಈ ಮೇಲ್ಕಾಣಿಸಿರುವ ನಿಲ್ದಾಣಗಳಲ್ಲಿ ನಿಲ್ಲಿಸಿರುವ ವಾಹನಗಳಿಗೆ ಮೇಲ್ಕಾಣಿಸಿದಂತೆ ನಿಗದಿತ ಶುಲ್ಕವನ್ನು ಮಾತ್ರ ವಸೂಲಿ ಮಾಡತಕ್ಕ.
6. ಸರ್ಕಾರಿ ಕಛೇರಿಗಳ ಸೈಕಲ್: ಸ್ಕೂಟರ್:ಕಾರು ಚಾಲಕರುಗಳಿಂದ ಗುತ್ತಿಗೆದಾರರು ಶುಲ್ಕವನ್ನು ವಸೂಲಿ ಮಾಡಬಾರದು.
7. ಈ ನಿಲ್ದಾಣಗಳಲ್ಲಿ ನಿಗದಿತ ವೇಳೆಯಲ್ಲಿ ನಿಲ್ಲಿಸಿರುವ ವಾಹನಗಳ ಭದ್ರತೆಯ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ. ಈ ಸ್ಟ್ಯಾಂಡಿನಲ್ಲಿ ವಾಹನಗಳನ್ನು ನಿಲ್ಲಿಸಿದ ಅವಧಿಯಲ್ಲಿ ವಾಹನಗಳಿಗೆ ಯಾವುದೇ ನಷ್ಟ ಅಥವಾ ಹಾನಿ ಉಂಟಾದಲ್ಲಿ ಗುತ್ತಿಗೆದಾರರು ಇದಕ್ಕೆ ಪರಿಹಾರವನ್ನು ನೀಡಲು ಜವಾಬ್ದಾರರಾಗಿರುತ್ತಾರೆ.
8. ಸೈಕಲ್, ಸ್ಕೂಟರ್, ಕಾರ್ ನಿಲ್ದಾಣದಲ್ಲಿ ನಿಲ್ಲಿಸಿರುವ ವಾಹನಗಳ ಭದ್ರತೆಯ ಪೂರ್ಣ ಜವಾಬ್ದಾರಿ ಗುತ್ತಿಗೆದಾರದ್ದಾಗಿರುತ್ತದೆ.
9. ಈ ನಿಲ್ದಾಣದಲ್ಲಿ ನಿಗದಿತ ವೇಳೆಯಲ್ಲಿ ನಿಲ್ಲಿಸಿರುವ ಯಾವುದೇ ವಾಹನವು ಕಾಣೆಯಾದಲ್ಲಿ ಅಥವಾ ಅದಕ್ಕೆ ಹಾನಿಯಾದಲ್ಲಿ ಇದು ಗುತ್ತಿಗೆದಾರರ ನಿರ್ಲಕ್ಷ್ಯತನ ಅಥವಾ ಉಪೇಕ್ಷೆಯಿಂದ ಆಗಿದ್ದಲ್ಲಿ, ಗುತ್ತಿಗೆದಾರರೇ ವಾಹನದ ಮಾಲೀಕರಿಗೆ ಪರಿಹಾರ ಕೊಡುವ ವಿಷಯದಲ್ಲಿ ಮುಖ್ಯ ಕಾರ್ಯದರ್ಶಿಗಳು ಕೊಡುವ ನಿರ್ಣಯವು ಅಂತಿಮವಾಗಿರುತ್ತದೆ. ಗುತ್ತಿಗೆ ಅವಧಿ ಮುಗಿದ ಮೇಲೆ ಗುತ್ತಿಗೆದಾರರಿಂದ ಸರ್ಕಾರಕ್ಕಾಗಲೀ ಅಥವಾ ವಾಹನದ ಮಾಲೀಕರಿಗಾಗಲೀ ಯಾವುದೇ ಬಾಕಿ ಇದ್ದಲ್ಲಿ ಅದನ್ನು ಮುಂಗಡ ಹಣದಿಂದ ಕಳೆದು ಬಾಕಿ ಹಣವನ್ನು ಗುತ್ತಿಗೆದಾರರಿಗೆ ಹಿಂತಿರುಗಿಸಲಾಗುವುದು.
10. ಗುತ್ತಿಗೆಯನ್ನು ಒಪ್ಪಿದ ದಿನಾಂಕದಿಂದ 15 ದಿವಸದೊಳಗೆ ಗುತ್ತಿಗೆದಾರರು ನಿಗದಿತ ಪ್ರಪತ್ರದಲ್ಲಿ ಕರಾರನ್ನು ಸಹಿ ಮಾಡಿ ಕೊಡತಕ್ಕದ್ದು.
11. ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳ ಉಲ್ಲಂಘನೆಯಾದಲ್ಲಿ ಗುತ್ತಿಗೆಯನ್ನು ರದ್ದು ಪಡಿಸಲಾಗುವುದು. ಅಂತಹ ಸಂದರ್ಭದಲ್ಲಿ ಭದ್ರತಾ ಠೇವಣಿಯಾಗಿ ಇಟ್ಟಿರುವ ಮುಂಗಡ ಹಣವನ್ನು ಹಾಗೂ ಮುಂಗಡವಾಗಿ ಪಾವತಿ ಮಾಡಿರುವ ಗುತ್ತಿಗೆ ಶುಲ್ಕವನ್ನು ಮುಟ್ಟುಗೋಲು ಹಾಕಲಾಗುವುದು.
12. ಗುತ್ತಿಗೆದಾರರು, ಗುತ್ತಿಗೆ ನಡೆಸುವ ಎಲ್ಲಾ ಸ್ಥಳಗಳಲ್ಲಿ ಸರ್ಕಾರಿ ಸಿಬ್ಬಂದಿ ಮತ್ತು ಸಾರ್ವಜನಿಕರಿಗೆ ನಿಗದಿಪಡಿಸಿರುವ ಶುಲ್ಕವನ್ನು ಬೋರ್ಡ್‌ನಲ್ಲಿ ಕಡ್ಡಾಯವಾಗಿ ಪ್ರದರ್ಶಿಸತಕ್ಕದ್ದು.

9. ಗುತ್ತಿಗೆಯ ಷರತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಮಾತ್ರವಲ್ಲದೆ ಬೇರೆ ಯಾವುದೇ ಕಾರಣಗಳಿಗಾಗಿ ಯಾವುದೇ ಸಮಯದಲ್ಲಿ, ಗುತ್ತಿಗೆದಾರರಿಗೆ 2 ತಿಂಗಳ ಸೂಚನಾ ಪತ್ರ ನೀಡಿ ಗುತ್ತಿಗೆಯನ್ನು ರದ್ದುಪಡಿಸಲು ಸರ್ಕಾರಕ್ಕೆ ಹಕ್ಕಿರುತ್ತದೆ. ಈ ಉಪ ವಾಕ್ಯದಂತೆ ಗುತ್ತಿಗೆಯನ್ನು ರದ್ದುಪಡಿಸಿದಲ್ಲಿ ಉಳಿದ ಗುತ್ತಿಗೆ ಅವಧಿಗೆ ಸಮ ಪ್ರಮಾಣದ ಗುತ್ತಿಗೆ ಶುಲ್ಕವನ್ನು ಗುತ್ತಿಗೆದಾರರಿಗೆ ಮರಳಿ ಪಡೆಯುವ ಹಕ್ಕಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ರವಿಮೂರ್ತಿ**

ಪಿ.ಆರ್. 301

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1)

**FORM - IV**
**(See Rule 12)**
**NOTICE**

It is hereby notified that the undersigned has changed his name from **YALLAPP HOLALAPP. MADAR** to **YALLAPP. HOLALAPP. HOSAMANI**

P.D. 123 **YALLAPP HOLALAPP MADAR**

**FORM - IV**
**(See Rule 12)**
**NOTICE**

It is hereby notified that the undersigned has changed his name from **RAVUTAPPA SHIVAPPA MADAR** to **RAVUTAPPA SHIVAPPA DEVARAMANI**

P.D. 124 **RAVUTAPPA SHIVAPPA MADAR**

**FORM - IV**
**(See Rule 12)**
**NOTICE**

It is hereby notified that the undersigned has changed his name from **GANGADHAR BASAVANNEPPA ANGADI** to **GANGADHAR VEERABHADRAPPA ARALI**

P.D. 125 **GANGADHAR BASAVANNEPPA ANGADI**

**FORM - IV**
**(See Rule 12)**
**NOTICE**

It is hereby notified that the undersigned has changed her name from **SIRAJUNNISA D/O HAMJA HUSSAIN** to **USHA R. SHETTY W/O RAVINDRA SHETTY**

P.D. 126 **SIRAJUNNISA D/O HAMJA HUSSAIN**

**DEPARTMENT OF EDUCATION**
**Office of the Deputy Director of Public Instruction, Bagalkot**
**FORM I**
**(See Rule - 9)**
**NOTIFICATION**

Shri **AMOGI YAMANAPPA MADAR** working as Assistant Teacher in the Education Department of / Office of the Deputy Director of Public Instruction, Bagalkot is permitted to change his surname to **AMOGI YAMANAPPA IHOLLI.**

P.D. 98 **AMOGI YAMANAPPA MADAR**

**ಭದ್ರಾವತಿ ಅರಣ್ಯ ವಿಭಾಗ**
**ಸಂಖ್ಯೆ:ಎ2-ಬಿಯುಡಿ-05/06-07 ಭದ್ರಾವತಿ, ದಿನಾಂಕ: 25ನೇ ಮೇ 2006**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2007ನೇ ಸಾಲಿನ ಮಳೆಗಾಲದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ಅರಣ್ಯ ಪ್ರದೇಶಗಳಲ್ಲಿ ನೆಡುತೋಪು ರಚನೆ ಮಾಡಲು ಮುಂಗಡ ರಿಪ್ಪಿಂಗ್ ಕಾಮಗಾರಿ, ಜಾನುವಾರು ನಿರೋಧಕ ಕಂದಕ ಮತ್ತು ಗುಂಡಿ ತೆಗೆಯುವುದು ಹಾಗು ಸಸಿ ಬೆಳೆಸಲು ಕೊಟ್ಟಿಗೆ ಗೊಬ್ಬರ, ಮರಳು ಮತ್ತು ಕೆಂಪು ಮಣ್ಣು ಸರಬರಾಜು ಮಾಡುವ ಕಾಮಗಾರಿಗಳನ್ನು ನಿರ್ವಹಿಸಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಅರಣ್ಯ ಗುತ್ತಿಗೆದಾರರು ದಿ: 20.06.2006 ರ ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ಅರಣ್ಯ ವಿಭಾಗ, ಭದ್ರಾವತಿ ಇವರಿಗೆ ಸಲ್ಲಿಸಲು ಕೋರಿದೆ ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆರೆಯಲಾಗುವುದು.

| ಕ್ರ. ಸಂ. | ಯೋಜನೆ ಹೆಸರು | ಮಾದರಿ | ವಲಯದ ಹೆಸರು | ಕಾಮಗಾರಿ ಪ್ರದೇಶದ ಹೆಸರು | ಸರ್ವೆ ನಂ. | ಪ್ರದೇಶ | ಅಂದಾಜು ಮೊತ್ತ | ಠೇವಣಿ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| **ನೆಡುತೋಪು ರಚನೆ** | | | | | | | | |
| 1. | 12ನೇ ಆರ್ಥಿಕ ಆಯೋಗ | ಉರುವಲು | ಚನ್ನಗಿರಿ | ದಿಗ್ಗೇನಹಳ್ಳಿ | 84,85 | 25 ಹೆ. | 328000 | 6600/- |
| | | | ಅಜ್ಜಂಪುರ | ಚೀರನಹಳ್ಳಿ | 50 | 25 ಹೆ. | 328000/- | 6600/- |
| | | | ಭದ್ರಾವತಿ | ಗುಡ್ಡದಹಳ್ಳಿ | | 25ಹೆ. | 223000/- | 4500/- |
| | | | ಚನ್ನಗಿರಿ | ಕಲ್ ಕರೆ | 20 | 20 ಹೆ. | 26500/- | 5300/- |
| | | ಗ್ಯಾಪ್ ಪ್ಲಾಂಟಿಂಗ್ | ತರೀಕೆರೆ | ಗಂಗೂರು | 56,51 | 25 ಹೆ. | 55000/- | 1100/- |
| | | | ಉಂಬ್ಳೇಬೈಲು | ಉಂಬ್ಳೇಬೈಲು | | 25 ಹೆ. | 55000/- | 1100/- |
| 2. | ಕ್ಷೀಣಿತ ಅರಣ್ಯ ಕೆ.ಎಸ್.ಎಂ.ಬಿ.ಸಿ. | - | ಚನ್ನಗಿರಿ | ದಿಗ್ಗೇನಹಳ್ಳಿ | 85 | 20 ಹೆ. | 176000/- | 3500/- |
| | | 4 | ಉಂಬ್ಳೇಬೈಲು | ಎಡೇಹಳ್ಳಿ | 20 | 40 | 348000/- | 7000/- |
| | | | | ಹಾಲ್ ಲಕ್ಕವಳ್ಳಿ | | | | |
| | | | ತರೀಕೆರೆ | ತ್ಯಾಗದ ಬಾಗಿ ಅತ್ತಿಗನಾಳು | 120 | 62ಹೆ. | 564200/- | 11300/- |
| | | | | ಕೆಂಚೀನಹಳ್ಳಿ | 37 | 30ಹೆ. | 273000/- | 5500/- |
| | | | ಲಕ್ಕವಳ್ಳಿ | ಕರಕುಚ್ಚಿ | 75,76 | 20 ಹೆ. | 174000/- | 14700/- |
| 3. | ಕೆ.ಎಸ್. ಎಂ.ಬಿ.ಸಿ. | | ಅಜ್ಜಂಪುರ | ಚೀರನಹಳ್ಳಿ 1,2,3,4 | 120 | 81 ಹೆ. | 737100/- | 14700/- |
| | | | ಚನ್ನಗಿರಿ | ಕೆ.ಹೊಸಳ್ಳಿ | 15 | 30 ಹೆ. | 273000/- | 5500/- |
| | | | | ಕಲ್ ಕೆರೆ ಭಾಗ 1,2 | 24,25 | 50 ಹೆ. | 455000/- | 9100/- |
| | | | ಶಾಂತಿ ಸಾಗರ | ಮಾಡಾಳ್ ಭಾಗ 1,2 | 38 | 40 ಹೆ. | 364000/- | 7200/- |
| | | | | **ಒಟ್ಟು** | | **353 ಹೆ.** | | |

| ಕ್ರ. ಸಂ. | ಯೋಜನೆ ಹೆಸರು | ಮಾದರಿ | ವಲಯದ ಹೆಸರು | ಕಾಮಗಾರಿ ಪ್ರದೇಶದ ಹೆಸರು | ಸರ್ವೆ ನಂ. | ಪ್ರದೇಶ | ಅಂದಾಜು ಮೊತ್ತ | ಠೇವಣಿ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| **ಮಾನ್ ಸೂನ್ ನೆಡುತೋಪು ರಚನೆ** | | | | | | | | |
| 4. | ಕೆ.ಎಸ್.ಎಫ್.ಎಂ. ಬಿ.ಸಿ. | 1 | ಅಜ್ಜಂಪುರ | ಹಣ್ಣೆ | 1 | 75 ಹೆ. | 466125/- | 9300/- |
| | | | ಚನ್ನಗಿರಿ | ಕೆ.ಯು.ಎಸ್. ಎಫ್. ಬಂಡಿಗುಡ್ಡ | 1 | 75 ಹೆ. | 466125/- | 9300/- |
| | | | | **ಒಟ್ಟು** | | **150 ಹೆ.** | | |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 5. | ಕೆ.ಎಸ್.ಎಫ್.ಎಂ. ಬಿ.ಸಿ. | | ಚನ್ನಗಿರಿ | ಉಬ್ರಾಣಿ | 23 | 50 ಹೆ. | 690900/- | 13800/- |
| | | | ತರೀಕೆರೆ | ತ್ಯಾಗದಬಾಗಿ | 60,61 | 50 ಹೆ. | 690900/- | 13800/- |
| | | | ಶಾಂತಿ ಸಾಗರ | ಭದ್ರಾಪುರ | 35 | 50 ಹೆ. | 690900/- | 13800/- |
| | | | | **ಒಟ್ಟು** | | **150 ಹೆ.** | | |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 6. | ಕೆ.ಎಸ್.ಎಫ್.ಎಂ. ಬಿ.ಸಿ. | 3 | ಚನ್ನಗಿರಿ | ಬೀಡಗೊಂಡನ ಹಳ್ಳಿ | 6,9 | 25ಹೆ. | 400000/- | 8000/- |
| | | | | ಪೆನ್ನಸಮುದ್ರ | 43,44 | 25 ಹೆ. | 400000/- | 8000/- |
| | | | ಭದ್ರಾವತಿ | ದೇವರಹಳ್ಳಿ | 55 | 25 ಹೆ. | 400000/- | 8000/- |
| | | | | ವರವಿನಕೆರೆ | 3 | 25 ಹೆ. | 400000/- | 8000/- |
| | | | ಉಂಬ್ಳೇಬೈಲು | ಹುಣಸೇ ಕಟ್ಟೆ | 14 | 25 ಹೆ. | 400000/- | 8000/- |
| | | | ತರೀಕೆರೆ | ತ್ಯಾಗದ ಬಾಗಿ | 60,61 | 25 ಹೆ. | 400000/- | 8000/- |
| | | | | ನಂದಿಬಟ್ಲು | 70,72 | 25 ಹೆ. | 400000/- | 8000/- |
| | | | ಶಾಂತಿ ಸಾಗರ | ಭದ್ರಾಪುರ | 29,33 | 25 ಹೆ. | 400000/- | 8000/- |
| | | | | **ಒಟ್ಟು** | | **200 ಹೆ.** | | |
| **ಮುಂಗಡ ರಿಪ್ಪಿಂಗ್ ಕಾಮಗಾರಿ** | | | | | | | | |
| 7. | ಕೆ.ಎಸ್.ಎಫ್.ಎಂ. ಬಿ.ಸಿ. | 4 | ಚನ್ನಗಿರಿ | ತುಪ್ಪದಹಳ್ಳಿ | 17 | 50ಹೆ | 531750/- | 10600/- |
| | | | ಭದ್ರಾವತಿ (ರಿಪ್ಪಿಂಗ್) | ಕೂಡ್ಲಿಗೆರೆ | 67 | 50ಹೆ. | 531750/- | 10600/- |
| | | | ಶಾಂತಿ ಸಾಗರ | ಭದ್ರಾಪುರ | 22 | 50 ಹೆ | 531750/- | 10600/- |
| | | | ತರೀಕೆರೆ | ಅತ್ತಿಗನಾಳು | 120 | 50 ಹೆ. | 531750/- | 10600/- |
| | | | ಅಜ್ಜಂಪುರ | ಗಡಿರಂಗಾಪುರ | 1 | 50 ಹೆ. | 531750/- | 10600/- |
| | | | | **ಒಟ್ಟು** | | **250 ಹೆ.** | | |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 8. | ಕೆ.ಎಸ್.ಎಫ್.ಎಂ. ಬಿ.ಸಿ. | 5 | ಚನ್ನಗಿರಿ | ಕಲ್ ಕೆರೆ | 57 | 25 ಹೆ. | 198425/- | 4000/- |
| | | | | ಪೆನ್ನಸಮುದ್ರ | 43,44 | 25 ಹೆ. | 198425/- | 4000/- |
| | | | ಭದ್ರಾವತಿ | ಕೂಡ್ಲಿಗೆರೆ | 76 | 25 ಹೆ. | 198425/- | 4000/- |
| | | | ಶಾಂತಿ ಸಾಗರ | ಮಲ್ಲಿಗೇನಹಳ್ಳಿ | 27 | 25 ಹೆ. | 198425/- | 4000/- |
| | | | ತರೀಕೆರೆ | ನಂದಿಬಟ್ಲು | 76,72 | 25 ಹೆ. | 198425/- | 4000/- |
| | | | ಉಂಬ್ಳೇಬೈಲು | ಹಾಗಲಮನೆ | 35 | 25 ಹೆ. | 198425/- | 4000/- |
| | | | ಅಜ್ಜಂಪುರ | ಹಣ್ಣೆ | 1 | 25 ಹೆ. | 198425/- | 4000/- |
| | | | ಲಕ್ಕವಳ್ಳಿ | ಕರಕುಚ್ಚಿ | 75,76 | 25 ಹೆ. | 198425/- | 4000/- |
| | | | | **ಒಟ್ಟು** | | **200 ಹೆ.** | | |
| 9. | 12ನೇ ಆರ್ಥಿಕ ಆಯೋಗ | ಉರುವಲು | ಚನ್ನಗಿರಿ (ರಿಪ್ಪಿಂಗ್) | ಪೆನ್ನಸಮುದ್ರ | 43,44 | 20 ಹೆ. | 273000/- | 5400/- |
| | | | ಲಕ್ಕವಳ್ಳಿ (ಗುಂಡಿ) | ಗುರುಪುರ | 8 | 20 ಹೆ. | 273000/- | 5400/- |
| | | | ಶಾಂತಿ ಸಾಗರ (ರಿಪ್ಪಿಂಗ್) | ಸಾರಥಿ | 62 | 20 ಹೆ. | 273000/- | 5400/- |
| | | | | **ಒಟ್ಟು** | | **60 ಹೆ.** | | |

| ಕ್ರ. ಸಂ. | ಯೋಜನೆ ಹೆಸರು | ಮಾದರಿ | ವಲಯದ ಹೆಸರು | ಕಾಮಗಾರಿ ಪ್ರದೇಶದ ಹೆಸರು | ಸರ್ವೆ ನಂ. | ಪ್ರದೇಶ | ಅಂದಾಜು ಮೊತ್ತ | ಠೇವಣಿ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| **ಸಸ್ಯಕ್ಷೇತ್ರಗಳಲ್ಲಿ ಸಸಿಬೆಳೆಸುವಿಕೆ (ಮಿಶ್ರಣ ಸರಬರಾಜು ಸೇರಿ)** | | | | | | **(ಸಂಖ್ಯೆಗಳಲ್ಲಿ)** | | |
| 10. | ಕೆ.ಎಸ್.ಎಫ್.ಎಂ. ಬಿ.ಸಿ. | | ಚನ್ನಗಿರಿ | ಮಾವಿನಹೊಳೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 78000 | 331500/- | 6600/- |
| | | | | | 14*20 | 5500 | 91025/- | 1800/- |
| | | | ತರೀಕೆರೆ | ಬಾವಿಕೆರೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 78000 | 331500/- | 6600/- |
| | | | | | 14*20 | 2750 | 45400/- | 900/- |
| | | | ಶಾಂತಿ ಸಾಗರ | ಮಾವಿನ ಕಟ್ಟೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 54000 | 229500/- | 4600/- |
| | | | | | 14*20 | 2750 | 45400/- | 900/- |
| | | | ಭದ್ರಾವತಿ | ಕೂರ್ಲಕೊಪ್ಪ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 54000 | 229500/- | 4600/- |
| | | | | | 14*20 | 2750 | 45400/- | 900/- |
| | | | ಉಂಬ್ಳೇಬೈಲು | ಕಾಕನಹೊಸೂಡಿ ಸಸ್ಯಕ್ಷೇತ್ರ | 8*12 | 24000 | 102000/- | 2000/- |
| | | | | | 14*20 | 2750 | 45400/- | 900/- |
| | | | ಅಜ್ಜಂಪುರ | ಪರ್ವತರಾಯನಕೆರೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 14*20 | 2750 | 45400/- | 900/- |
| | | | ಲಕ್ಕವಳ್ಳಿ | ಲಕ್ಕವಳ್ಳಿ ಸಸ್ಯಕ್ಷೇತ್ರ | 14 *20 | 2750 | 45400/- | 900/- |
| **ಸಸಿ ಬೆಳಸುವಿಕೆ** | | | | | | | | |
| 11 | 12ನೇ ಆರ್ಥಿಕ ಆಯೋಗ | | ಚನ್ನಗಿರಿ | ಮಾವಿನ ಹೊಳೆ | 5*8 | 36000 | 55600/- | 1100/- |
| | | | | | 8*12 | 2400 | 11400/- | 200/- |
| | | | ಶಾಂತಿನಗರ | ಮಾವಿನಕಟ್ಟೆ | 5*8 | 36000 | 56600/- | 1100/- |
| | | | | | 8*12 | 2400 | 11400/- | 200/- |
| | | | ಲಕ್ಕವಳ್ಳಿ | ಲಕ್ಕವಳ್ಳಿ | 5*8 | 36000 | 56600/- | 1100/- |
| | | | | | 8*12 | 2400 | 11400/- | 200/- |
| | | | | **ಒಟ್ಟು** | **5*8** | **108000** | | |
| | | | | | **8*12** | **7200** | | |
| 12. | ಕ್ಷೀಣಿತ ಅರಣ್ಯ | | ಲಕ್ಕವಳ್ಳಿ | ಲಕ್ಕವಳ್ಳಿ | 5*8 | 36000 | 56600/- | 1100/- |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 13. | ಕ್ಷೀಣಿತ ಅರಣ್ಯ | | ಲಕ್ಕವಳ್ಳಿ | ಶಾಂತಿಪುರ | 67 | 20 ಹೆ. | 56600/- | 1100/- |

**ನಿಬಂಧನೆಗಳು:**

1. ಭದ್ರಾವತಿ ಅರಣ್ಯ ವಿಭಾಗದಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು. 12.00 ರೂ ಪಾವತಿಸಿ ಟೆಂಡರ್ ಫಾರಂನ್ನು ದಿ:20.6.2006 ರಂದು ಈ ಕಛೇರಿಯಿಂದ ಪಡೆಯಬಹುದು. ದರವನ್ನು ಮಂಜೂರಾದ ಅನುಸೂಚಿ ದರದ ಮೇಲೆ ಶೇಕಡ ಇಂತಿಷ್ಟು ಹೆಚ್ಚು ಅಥವಾ ಕಡಿಮೆ ಎಂಬುದನ್ನು ನಮೂದಿಸಬೇಕು.
2. **ಕಾಲಾವಧಿ:** 1)ನೆಡುತೋಪುಗಳಲ್ಲಿ ಗಿಡನೆಡುವ ಕಾರ್ಯವನ್ನು 31.7.2006 ಹಾಗೂ ಇತರೆ ನಿರ್ವಹಣೆ ಕಾಮಗಾರಿಯನ್ನು ಹವಾಗುಣಕ್ಕನುವಾಗಿ ಮತ್ತು ವಲಯ ಅರಣ್ಯಾಧಿಕಾರಿಗಳ ಸೂಚನೆಗೆ ಅನುಸಾರವಾಗಿ 31.3.2007 ರವರೆಗೆ ನಿರ್ವಹಿಸಬೇಕು. 2) ಮುಂಗಡ ರಿಪ್ಪಿಂಗ್ ಮತ್ತು ಗುಂಡಿ ತೋಡುವ ಕಾಮಗಾರಿಗಳನ್ನು ಸೆಪ್ಟೆಂಬರ್ 15 ರ ನಂತರ 30.11.2006 ರೊಳಗೆ ನಿರ್ವಹಿಸಬೇಕು. 3) ಸಸ್ಯಕ್ಷೇತ್ರಕ್ಕೆ ಗೊಬ್ಬರ, ಮರಳು ಮತ್ತು ಮಣ್ಣನ್ನು 31.7.2006 ರೊಳಗೆ ಸರಬರಾಜು ಮಾಡುವುದು. ಇತರೆ ಕಾಮಗಾರಿಗಳನ್ನು 31.3.2007 ರವರೆಗೆ ನಿರ್ವಹಿಸಬೇಕು.
3. ಇತರೆ ನಿಬಂಧನೆಗಳನ್ನು ವಿಭಾಗ ಕಛೇರಿಯಿಂದ ಪಡೆಯಬಹುದು.

**ಎ. ರಾಧಾದೇವಿ**

ಪಿ.ಆರ್. 303

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ

## ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ ಸಾಮಾಜಿಕ ಅರಣ್ಯ

## ಅರಣ್ಯ ಭವನ, 6ನೇ ಮಹಡಿ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - 560 003

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ:ಎ2(ಬಿ):ಬಿಯುಡಿ:ಸಾಅ:ದೂರವಾಣಿ ಸೌಲಭ್ಯ:ಸಿಆರ್-41:2005-06, ದಿನಾಂಕ: 25ನೇ ಮೇ 2006**

ಅರಣ್ಯ ಇಲಾಖೆಗೆ ಸುಮಾರು 150 ನೋಕಿಯಾ ಮೊಬೈಲ್ ಫೋನುಗಳು (ಮಾಡಲ್ 2600) ಬೇಕಾಗಿದ್ದು ಸರಬರಾಜು ಮಾಡಲು ಒಇಎಮ್ (Original Equipment Manufacturers) ಮತ್ತು ಅವರ ಅಂಗೀಕೃತ ವಿತರಕರಿಂದ ಮುಂಗಡ ಠೇವಣಿಯೊಂದಿಗೆ (EMD) ಮೊಹರು ಮಾಡಿದ ಟೆಂಡರ್‌ಗಳನ್ನು ಕರೆಯಲಾಗಿದೆ. ವಿತರಕರು ISO 9001 / 14001 ಪ್ರಮಾಣ ಪತ್ರವನ್ನು ಹೊಂದಿರಬೇಕು. ಟೆಂಡರ್‌ನ ಒಟ್ಟು ಮೊತ್ತ ಸುಮಾರು ರೂ. 5.00 ಲಕ್ಷಗಳು.

| ಕ್ರ. ಸಂ. | ವಿವರ | ಪರಿಮಾಣ | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|
| 1 | 2600 ಮಾಡಲ್‌ನ ನೋಕಿಯಾ ಮೊಬೈಲ್ ಫೋನ್ | 150 ಸಂಖ್ಯೆ | 12,500-00 ರೂಗಳು | 100 ರೂಗಳು |

ಟೆಂಡರ್ ಫಾರಂಗಳನ್ನು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ, 6ನೇ ಮಹಡಿ ಅರಣ್ಯ ಭವನ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003 ಕಛೇರಿಯಲ್ಲಿ ದಿನಾಂಕ: 25.5.2006 ರಿಂದ ದಿನಾಂಕ: 25.6.2006 ಮಧ್ಯಾಹ್ನ 12.00 ಗಂಟೆಯವರೆಗೆ ನೀಡಲಾಗುವುದು. ಆಸಕ್ತಿಯುಳ್ಳ ಸಂಸ್ಥೆಗಳು ಟೆಂಡರ್ ಫಾರಂಗಳ ಬೆಲೆ ರೂ.100.00 (ತೆರಿಗೆಯೂ ಸೇರಿದಂತೆ) ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಸಾಮಾಜಿಕ ಅರಣ್ಯ), ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಡಿ.ಡಿ. ಗಳನ್ನು ಪಾವತಿಸಿ ಟೆಂಡರ್ ಫಾರಂಗಳನ್ನು ಪಡೆಯಬಹುದು.

ಇ.ಎಂ.ಡಿ. ಮೊತ್ತದ ಡಿ.ಡಿ.ಯೊಂದಿಗೆ ಟೆಂಡರ್ ಫಾರಂಗಳನ್ನು ದಿನಾಂಕ: 25.6.2006 ರಂದು ಸಾಯಂಕಾಲ 4-00 ಗಂಟೆಯವರೆಗೆ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ಭವನ, ಬೆಂಗಳೂರು ರವರ ಕೊಠಡಿಯಲ್ಲಿ ಸ್ವೀಕರಿಸಲಾಗುವುದು. ಮತ್ತು ಅದೇ ದಿನ ಸಾಯಂಕಾಲ 4-15 ಗಂಟೆಗೆ ಟೆಂಡರ್ ತೆಗೆಯಲಾಗುವುದು. ಅಂಗೀಕೃತ ಟೆಂಡರುಗಳನ್ನು ದಿನಾಂಕ: 25.6.2006 ಸಂಜೆ 4-15ಕ್ಕೆ ಪ್ರಕಟಿಸಲಾಗುವುದು.

ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ, ಬೆಂಗಳೂರು.

ಪಿ.ಆರ್. 296

## ಆರ್ಥಿಕ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಆಇ 54 ಆಖಇ 06, ಬೆಂಗಳೂರು, ದಿನಾಂಕ: 25ನೇ ಮೇ 2006**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಖಜಾನೆ ಇಲಾಖೆಯ ಗ್ರೂಪ್-ಬಿ ವೃಂದದ ಸಹಾಯಕ ಖಜಾನಾಧಿಕಾರಿ ಹುದ್ದೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ Conf.25/ 2005-06/PSC, Bangalore ದಿನಾಂಕ: 28.2.2006ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ. ಇದೇ ಸಮ ಸಂಖ್ಯೆಯ ಅಧಿಸೂಚನೆ ದಿ:4.5.06ರಲ್ಲಿ 26 ಸಹಾಯಕ ಖಜಾನಾಧಿಕಾರಿಗಳ ನೇಮಕಾತಿ ಆದೇಶ ಹೊರಡಿಸುವ ಸಂದರ್ಭದಲ್ಲಿ ಕೆಲವೊಂದು ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಆರಕ್ಷಕ ವರದಿ, ಸಿಂಧುತ್ವ ಪ್ರಮಾಣ ಪತ್ರಗಳು ಬಾರದೇ ಇದ್ದ ಕಾರಣ ಅಂತಹವರುಗಳ ಹೆಸರುಗಳನ್ನು ಹೊರತುಪಡಿಸಿ ಉಳಿದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ಹೊರಡಿಸಲಾಗಿತ್ತು. ಪ್ರಸ್ತುತ ಈ ಕೆಳಕಂಡ 4 ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಆರಕ್ಷಕ ವರದಿ, ಸಿಂಧುತ್ವ ಪ್ರಮಾಣ ಪತ್ರಗಳನ್ನು ಸ್ವೀಕರಿಸಿದ್ದು ಇವುಗಳಲ್ಲಿ ಯಾವುದೇ ವ್ಯತಿರಿಕ್ತ ವರದಿ ಇಲ್ಲದಿರುವುದರಿಂದ, ಇವರುಗಳನ್ನು ರೂ.6000-150-7200-200-8800-260-10880-320-11200ರ ವೇತನ ಶ್ರೇಣಿಯ ಸಹಾಯಕ ಖಜಾನಾಧಿಕಾರಿ ಹುದ್ದೆಯಲ್ಲಿ ಪರಿವೀಕ್ಷಣೆ ಮೇಲೆ (On Probation) ಈ ಮೂಲಕ ನೇಮಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ |
|---|---|
| 1. | ಗೋಪಾಲ ಸ್ವಾಮಿ ಬಿ.ಎನ್, S/o ನಂಜಪ್ಪ, ಬೀರವಳ್ಳಿ ಪೋಸ್ಟ್, ಅಕ್ಕಿ ಹೆಬ್ಬಾಳ್ ಹೋಬಳಿ, ಕೃಷ್ಣರಾಜಪೇಟೆ ತಾ: ಮಂಡ್ಯ ಜಿಲ್ಲೆ-571 605. |
| 2. | ದೀಪಕ್ S/o ವೈಜನಾಥ್ ಅಡಪ್ಪ ಪೋಸ್ಟ್ ಹುಲ್ಲಸೂರು, ಬಸವ ಕಲ್ಯಾಣ ತಾ. ಬೀದರ್ ಜಿಲ್ಲೆ-585 416. |
| 3. | ಸಂಗಾಪುರ್ ಎಂ.ಎಸ್., ಪೋಸ್ಟ್ ನಿಡೋನಿ ತಾ, ಜಿಲ್ಲೆ ಬಿಜಾಪುರ. |
| 4. | ರುಕ್ಮಿಣಿ ದೇವಿ ಎನ್., D/o ನಾರಾಯಣ ಸ್ವಾಮಿ, ನಂ. 53, 1ನೇ ಮೈನ್, 1ನೇ ಕ್ರಾಸ್, ಯಲ್ಲಮ್ಮ ದೇವಸ್ಥಾನದ ರಸ್ತೆ ಜೆ.ನಗರ, ಬೆಂಗಳೂರು-560 032 |

ಈ ಅಭ್ಯರ್ಥಿಗಳ ಜೇಷ್ಠತೆಯು ಕರ್ನಾಟಕ ಲೋಕ ಸೇವಾ ಆಯೋಗವು ಆಯ್ಕೆ ಪಟ್ಟಿಲ್ಲಿ ನಮೂದಿಸಿರುವ ಜೇಷ್ಠತೆಯಂತೆಯೇ ಇರುವುದೆಂದು ಪುನರುಚ್ಚರಿಸಿದೆ. ಈ ನೇಮಕಾತಿಯು ಅಭ್ಯರ್ಥಿಗಳ ಆಯ್ಕೆಪಟ್ಟಿಗೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಛ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232/1999, ಕರ್ನಾಟಕ ಉಚ್ಛ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ ಸಂಖ್ಯೆ:27140/2005 ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿ ಮುಂದಿರುವ ಅರ್ಜಿಗಳ ಸಂಖ್ಯೆ:4184/2003, 1512/2003, 1741/2003 ಮತ್ತು 1172/2006ಗಳಲ್ಲಿ ನ್ಯಾಯಾಲಯಗಳು ನೀಡಬಹುದಾದ ತೀರ್ಪಿಗೆ ಒಳಪಟ್ಟಿರುತ್ತದೆ.

ಈ ಎಲ್ಲಾ ಅಭ್ಯರ್ಥಿಗಳು ಎರಡು ವರ್ಷಗಳ ಅವಧಿಯಲ್ಲಿ ಪರೀಕ್ಷಾರ್ಥ ತರಬೇತಿಯಲ್ಲಿರುತ್ತಾರೆ. ಈ ಅವಧಿಯಲ್ಲಿ 1974ರ ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆ ಹಾಗೂ ಈ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಮತ್ತು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಬೇಕು.

ಈ ಅಭ್ಯರ್ಥಿಗಳ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ಆದೇಶದ ಅಧೀನಕ್ಕೆ ಒಳಪಟ್ಟಿರುತ್ತದೆ.

ಈ ಅಭ್ಯರ್ಥಿಗಳು, ಈ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ನಿರ್ದೇಶಕರು, ಖಜಾನೆ ಇಲಾಖೆ ವಿ.ವಿ.ಗೋಪುರ, ಬೆಂಗಳೂರು-560 004, ಇವರಲ್ಲಿ ಕರ್ತವ್ಯದ ಮೇಲೆ ಹಾಜರಾಗತಕ್ಕದ್ದು ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಶ್ರೀನಿವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

ಪಿ.ಆರ್. 298

## ಸಹಾಯಕ ಕೃಷಿ ನಿರ್ದೇಶಕರವರ ಕಛೇರಿ, ರಾಮನಗರ

**ಸಂಖ್ಯೆ:ಸಕೃನಿರಾ:ಲೆಕ್ಕ2:ಜಡವಸ್ತು:ವಿಲೇ:05-06, ರಾಮನಗರ, ದಿನಾಂಕ: 30ನೇ ಮೇ 2006**

**ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ**

**ವಿಷಯ:** ಅನುಪಯುಕ್ತ ಜಡವಸ್ತುಗಳನ್ನು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಜಂಟಿ ಕೃಷಿ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಪತ್ರದ ಸಂಖ್ಯೆ:ಜಕೃನಿ: ಬೆಂ.ಗ್ರಾ.ಜಿ.ಲೆಕ್ಕಾ: ಜಡವಸ್ತು ಹರಾಜು:05-06 ದಿನಾಂಕ: 8.5.2006.

ಸಹಾಯಕ ಕೃಷಿ ನಿರ್ದೇಶಕರು, ರಾಮನಗರ ಕಛೇರಿಯಲ್ಲಿರುವ ಕೆಳಕಂಡ ಅನುಪಯುಕ್ತ ಜಡವಸ್ತುಗಳನ್ನು ನಿಬಂಧನೆಗೊಳಪಟ್ಟು ಕಛೇರಿಯ ಆವರಣದಲ್ಲಿ ಯಾವ ರೀತಿಯಲ್ಲಿದೆಯೋ ಅದೇ ರೀತಿಯಲ್ಲಿ ದಿನಾಂಕ:20.7.2006 ರಂದು ಬೆಳಿಗ್ಗೆ 11.00 ಗಂಟೆಗೆ ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲಾಗುವುದು. ಹರಾಜಿಗೆ ಒಳಪಟ್ಟ ವಸ್ತುಗಳನ್ನು ಸಾರ್ವಜನಿಕ ರಜಾ ದಿನಗಳನ್ನು ಹೊರತುಪಡಿಸಿ ಕಛೇರಿಯ ಕೆಲಸದ ವೇಳೆಯಲ್ಲಿ ಬೆಳಿಗ್ಗೆ 10.00 ಗಂಟೆಯಿಂದ ಸಂಜೆ 5.30 ಗಂಟೆಯವರೆಗೆ ಪರಿಶೀಲಿಸಬಹುದು.

| ಕ್ರ. ಸಂ. | ಅನುಪಯುಕ್ತ ಜಡವಸ್ತುಗಳು | ಪರಿಮಾಣ |
|---|---|---|
| 1. | ಗೋಡೆ ಗಡಿಯಾರ | 01 ಸಂಖ್ಯೆ |
| 2. | ಕಬ್ಬಿಣ ಮುಡುಚುವ ಕುರ್ಚಿಗಳು | 12 ಸಂಖ್ಯೆಗಳು |
| 3. | 'ಎಸ್' ಮಾದರಿಯ ನೈಲಾನ್ ನೀರಿನ ಆರಾಮ ಕುರ್ಚಿ | 01 ಸಂಖ್ಯೆ |
| 4. | ಟೀಕ್‌ವುಡ್ ಚೇರುಗಳು | 02 ಸಂಖ್ಯೆಗಳು |
| 5. | ಕಬ್ಬಿಣದ ತ್ರಿಪಾದದ ಸ್ಟ್ಯಾಂಡ್ | 01 ಸಂಖ್ಯೆ |
| 6. | ಟಾರ್ಪಾಲಿನ್ | 01 ಸಂಖ್ಯೆ |
| 7. | ಸಾಯಿಲ್ ಟೆಸ್ಟಿಂಗ್ ಚಕ್ಟೋರಿಯಲ್ ಫ್ಲಿಪ್ ಚಾರ್ಟ್ಸ್ | 11 ಸಂಖ್ಯೆಗಳು |
| 8. | ಪ್ಲಾಂಟ್ ಪ್ರೊಟಷನ್ ಕಿಟ್ಸ್ | 01 ಸಂಖ್ಯೆ |
| 9. | ಕಛೇರಿಯ ನಾಮಫಲಕದ ಬೋರ್ಡು | 01 ಸಂಖ್ಯೆ |
| 10. | ಪ್ಲಾಂಟ್ ಪ್ರೊಟೆಕ್ಷನ್ ಟೂಲ್ ಕಿಟ್ ಬ್ಯಾಗ್ | 01 ಸಂಖ್ಯೆ |
| 11. | ಮರದ ಷೋಕೇಸ್ | 01 ಸಂಖ್ಯೆ |

ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ:20.7.2006 ರಂದು ಬೆಳಿಗ್ಗೆ 10.00 ಗಂಟೆಗೆ ಹಾಗೂ ದಿನಾಂಕ:20.7.2006 ರಂದು ಮಧ್ಯಾಹ್ನ 12.00 ಗಂಟೆಗೆ ಬಹಿರಂಗ ಹರಾಜು ನಡೆಸಲಾಗುವುದು. ಬಹಿರಂಗ ಹರಾಜು ಮುಗಿದ ನಂತರ ಅದೇ ದಿನ ಮೊಹರಾಗಿ ಬಂದ ಟೆಂಡರ್‌ಗಳನ್ನು ಒಡೆಯಲಾಗುವುದು. ಬಿಡ್ ಮಾಡುವ ಸವಾಲುದಾರರಿಂದ ರೂ. 500.00 ಗಳ ನಗದು ಅಥವಾ ಡಿ.ಡಿ. ಯನ್ನು ಕೊಳ್ಳುವುದರ ಮೂಲಕ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಸಹಾಯಕ ಕೃಷಿ ನಿರ್ದೇಶಕರು, ರಾಮನಗರ ಇವರ ಹೆಸರಿಗೆ ಠೇವಣಿಯನ್ನು ಕಟ್ಟಬೇಕು.

**ಷರತ್ತುಗಳು**

1. ಬಿಳಿಯ ಹಾಳೆಯಲ್ಲಿ ಬಿಡ್ ಮಾಡುವ ಟೆಂಡರ್ ಬೆಲೆಯನ್ನು ಅಂಕಿ ಮತ್ತು ಅಕ್ಷರಗಳಲ್ಲಿ ನಮೂದಿಸಿ ತಮ್ಮ ಪೂರ್ಣ ಅಂಚೆ ವಿಳಾಸದೊಂದಿಗೆ ಡಿ.ಡಿ. ಯ ಸಹಿತ ಮೊಹರು ಮಾಡಿದ ಲಕೋಟೆಯನ್ನು ಸಹಾಯಕ ಕೃಷಿ ನಿರ್ದೇಶಕರು, ರಾಮನಗರ ಇವರ ವಿಳಾಸಕ್ಕೆ "ಜಡ ವಸ್ತುಗಳ ಟೆಂಡರ್-ಕಂ-ಬಹಿರಂಗಹರಾಜು" ಎಂದು ನಮೂದಿಸಿ ಕಛೇರಿಗೆ ತಲುಪಿಸತಕ್ಕದ್ದು.
2. ಈ ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಬೆಲೆ ಸೂಚಿಸಿ ಯಶಸ್ವಿಯಾದ ಬಿಡ್‌ದಾರರು ಬಿಡ್ಡಿನ ಮೊತ್ತದ ಶೇ.25 ರಷ್ಟು ಹಣವನ್ನು ಸ್ಥಳದಲ್ಲಿ ಪಾವತಿಸಬೇಕಾಗುತ್ತದೆ. ಹಾಗೂ ಜಂಟಿ ಕೃಷಿ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಒಪ್ಪಿಗೆ ಪಡೆದ 7 ದಿನಗಳ ಒಳಗೆ ಪೂರ್ತಿ ಹಣವನ್ನು ಚಾಲ್ತಿಯಲ್ಲಿರುವ ತೆರಿಗೆ ಸಹಿತ ಪಾವತಿಸಿ ಅನುಪಯುಕ್ತ ಜಡವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ಸ್ಥಳದಿಂದ ಸಾಗಿಸಿಕೊಳ್ಳತಕ್ಕದ್ದು. ತಪ್ಪಿದ್ದಲ್ಲಿ ಸರ್ಕಾರಿ ನಿಯಮಾನುಸಾರ ನೆಲಬಾಡಿಗೆಯನ್ನು ವಿಧಿಸಲಾಗುವುದು. ನಿಗಧಿತ ದಿನಾಂಕದೊಳಗೆ ಪೂರ್ಣವಾಗಿ ಹಣ ಸಂದಾಯ ಮಾಡದೆ ಇದ್ದಲ್ಲಿ ಬಿಡ್‌ದಾರರ ಮುಂಗಡ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಯಾವುದೇ ತಕರಾರು ಉದ್ಭವಿಸಿದಲ್ಲಿ ಜಂಟಿ ಕೃಷಿ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ನಿರ್ಣಯವೇ ಅಂತಿಮವಾಗಿರುತ್ತದೆ.
3. ಟೆಂಡರದಾರರು ಇಚ್ಛಿಸಿದಲ್ಲಿ ರೂ.500.00ಗಳ ಇ.ಎಂ.ಡಿ. ಹಣವನ್ನು ಪ್ರತ್ಯೇಕವಾಗಿ ಕಟ್ಟಿ ಬಹಿರಂಗ ಹರಾಜಿನಲ್ಲಿಯೂ ಸಹ ಭಾಗವಹಿಸಬಹುದು.
4. ಜಯಶೀಲರಾದ ಟೆಂಡರ್‌ದಾರ-ಕಂ-ಬಹಿರಂಗ ಹರಾಜುದಾರರನ್ನು ಉಳಿದು, ಉಳಿದವರ ಮುಂಗಡ ಠೇವಣಿ ಹಣವನ್ನು ಅಂತಿಮ ತೀರ್ಮಾನದ ನಂತರ ಹಿಂದಿರುಗಿಸಲಾಗುವುದು.

ಸಹಾಯಕ ಕೃಷಿ ನಿರ್ದೇಶಕರು (ಪ್ರಭಾರ)

ರಾಮನಗರಂ

ಪಿ.ಆರ್. 302

## ಸಹಾಯಕ ಕೃಷಿ ನಿರ್ದೇಶಕರವರ ಕಛೇರಿ, ಚಳ್ಳಕೆರೆ

**ಸಂಖ್ಯೆ:ಸಕೃನಿ:ಚ:ಲೆಕ್ಕ-2:ಜಡವಸ್ತು:ವಿಲೇ:2004-05, ಚಳ್ಳಕೆರೆ, ದಿನಾಂಕ: 29ನೇ ಮೇ 2006**

**ವಿಷಯ:** ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಕಛೇರಿಯ ಅನುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಕಛೇರಿಯಲ್ಲಿ ಲಭ್ಯವಿರುವ ಈ ಕೆಳಕಂಡ ಕ್ರ.ಸಂ.1ರಿಂದ 15 ರವರೆಗಿನ ಅನುಪಯುಕ್ತ ವಸ್ತುಗಳನ್ನು ಕೆಳಕಂಡ ನಿಬಂಧನೆಗೊಳಪಟ್ಟು ಈ ಕಛೇರಿಯಲ್ಲಿ ವಸ್ತುಗಳು ಯಾವ ರೀತಿಯಲ್ಲಿ ಇದೆಯೋ ಅದೇ ರೀತಿಯಲ್ಲಿ ದಿನಾಂಕ:28.6.2006 ರಂದು ಮಧ್ಯಾಹ್ನ 3.30 ಗಂಟೆಗೆ ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಲು ಈ ಮೂಲಕ ಕೋರಲಾಗಿದೆ.

**ಅನುಪಯುಕ್ತ ವಸ್ತುಗಳ ಪಟ್ಟಿ**

| ಕ್ರ. ಸಂ. | ದಾಸ್ತಾನು ವಸ್ತುಗಳು | ಪರಿಮಾಣ |
|---|---|---|
| 1. | ಸ್ಟೀಲ್ ಲೋಟ | 5 |
| 2. | T.W. ಟೇಬಲ್ | 4 |
| 3. | T.W. ಬೆಂಚು | 3 |
| 4. | T.W ಇನ್ಸ್‌ಕ್ಟ್ ಮೆಂಟಿಂಗ್ ಟೇಬಲ್ | 5 |
| 5. | ಸ್ಟೀಲ್ ಜಗ್ | 1 |
| 6. | ಸ್ಟೀಲ್ ಡ್ರಮ್ | 1 |
| 7. | ಸೋಲಾರ್ ಲ್ಯಾಂಪ್ಸ್ | 4 |
| 8. | ಎಮರ್ಜೆನ್ಸಿ ದೀಪ | 1 |
| 9. | ಕಬ್ಬಿಣದ ಕೊಡಪಾನ | 2 |
| 10. | ವಾಟರ್ ಕ್ಯಾನ್ | 2 |
| 11. | ಐರನ್ ಸೇಪ್ (ತಿಜೋರಿ) | 1 |
| 12. | ಡಸ್ಟಬಿನ್ | 4 |
| 13. | ಗ್ರಾಮಿಟ್ ವಾಲ್ ಕ್ಲಾತ್ | 1 |
| 14. | ಸ್ಪ್ರೇಯರ್ | 12 |
| 15. | ಶುಗರ್‌ಕೇನ್ ಕಟರ್ | 1 |

**ನಿಬಂಧನೆಗಳು**

1. ಹರಾಜಿನಲ್ಲಿ ಪಾಲ್ಗೊಳ್ಳಲು ಇಚ್ಛೆಯುಳ್ಳವರು ರೂ.1000/-ನ್ನು ಮುಂಗಡ ಠೇವಣಿಯಾಗಿ ಹರಾಜಿನ ದಿನ ಬೆಳಗ್ಗೆ 10 ಗಂಟೆಯಿಂದ 11 ಗಂಟೆಯೊಳಗೆ ಕಟ್ಟಬೇಕು.
2. ಯಶಸ್ವಿ ಬಿಡ್‌ದಾರರು ಮಾರಾಟ ತೆರಿಗೆಯನ್ನು ಸರ್ಕಾರದ ನಿಯಮದಂತೆ ಪಾವತಿ ಮಾಡತಕ್ಕದ್ದು.
3. ಹರಾಜಿಗೆ ಇಟ್ಟ ವಸ್ತುಗಳನ್ನು ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆಯಲ್ಲಿ ಕಛೇರಿಯ ದಿನಗಳಂದು ಪರೀಕ್ಷಿಸಬಹುದು.
4. ಜಯಪ್ರದವಾದ ಹರಾಜು ನಿರ್ಣಯವನ್ನು ಅತ್ಯುನ್ನತ ಹರಾಜು ಬೆಲೆಯ ಮೇಲೆ ನಿರ್ಣಯಿಸಲಾಗುವುದು.
5. ಹರಾಜಿನ ಪ್ರಕಟಣೆಯಲ್ಲಿ ಯಾವುದೇ ವಿವಾದವಾದ ಪಕ್ಷದಲ್ಲಿ ಹರಾಜನ್ನು ತಿರಸ್ಕರಿಸುವ ಮುಂದುವರೆಸುವ ಹಾಗೂ ರದ್ದುಪಡಿಸುವ ಹಕ್ಕುಗಳು ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಇವರಿಗೆ ಇರುತ್ತದೆ.
6. ಹರಾಜಿನ ಎಲ್ಲಾ ವಿಷಯಗಳಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಇವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ. ಮತ್ತು ಭಾಗವಹಿಸುವ ಹರಾಜಿನ ಬಿಡ್ಡುದಾರರು ಈ ತೀರ್ಮಾನಕ್ಕೆ ಬದ್ದರಾಗಿರಬೇಕಾಗುತ್ತದೆ.
7. ಹರಾಜಿಗೆ ಸಂಬಂಧಿಸಿದಂತೆ ಕೃಷಿ ನಿರ್ದೇಶಕರು, ಬೆಂಗಳೂರು ಅವರ ಅನುಮೋದನೆ ಪಡೆದ ನಂತರ ಹೆಚ್ಚು ಬಿಡ್ ಮಾಡಿದ ಹರಾಜುದಾರರು ನಿಗದಿತ 7 ದಿನಗಳೊಳಗಾಗಿ ಪೂರ್ತಿ ಹಣವನ್ನು ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿ ಮಾಡಿ ವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ಹರಾಜಿನ ಸ್ಥಳದಿಂದ ತೆಗೆದುಕೊಂಡು ಹೋಗತಕ್ಕದ್ದು. ಯಾವ ಕಾರಣದಿಂದಲೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ. ಈ ನಿಯಮವನ್ನು ಪಾಲಿಸದಿದ್ದಲ್ಲಿ ಅವರ ಮುಂಗಡ ಠೇವಣಿ ಹಣವನ್ನು ಸರ್ಕಾರದ ಖಾತೆಗೆ ಯಾವ ರೀತಿಯ ತಿಳುವಳಿಕೆ ಕೊಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
8. ಜಯಶೀಲರಾದ ಹರಾಜುದಾರರನ್ನು ಹೊರತುಪಡಿಸಿ ಉಳಿದ ಬಿಡ್‌ದಾರರಿಗೆ ಮುಂಗಡ ಠೇವಣಿಯನ್ನು ಹರಾಜಿನ ಅನಂತರ ಹಿಂತಿರುಗಿಸಲಾಗುವುದು.

ಸಹಾಯಕ ಕೃಷಿ ನಿರ್ದೇಶಕರು,
ಚಳ್ಳಕೆರೆ

ಪಿ.ಆರ್. 304

## BANNERGHATTA BIOLOGICAL PARK
## INVITATION FOR "EXPRESSION OF INTEREST" FOR RUNNING THE CURIO SHOP

The Executive Director (ED) Bannerghatta Biological Park, Zoo Authority of Karnataka hereby invites "Expression of Interest" from parties running up-market curio shops / emporia to run a curio shop at the Butterfly Park nearing inauguration located within the park premises. Interest parties may vist the

location and submit comprehensive proposals, to reach the Executive Director before 28th June 2006. For details / clarifications, contact her at Ph: 080-7828540, 7828300.

Executive Director,
Bannerghatta Biological Park.

**ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್**

**ಅಭಿವ್ಯಕ್ತಿ ಸೂಚಿಸುವ ಬಗ್ಗೆ ಕ್ಯೂರಿಯೋ ಷಾಪ್ ಅನ್ನು ನಡೆಸಲು ಆಹ್ವಾನ**

ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು, ಇವರಿಂದ ಇದೀಗ ಪೂರ್ಣಗೊಂಡು ಉದ್ಘಾಟನೆಗೆ ಸಿದ್ಧವಿರುವ ಚಿಟ್ಟೆ ಉದ್ಯಾನವನದಲ್ಲಿ ಕ್ಯೂರಿಯೋ ಷಾಪ್ ಅನ್ನು ನಡೆಸಲು ಉನ್ನತ ದರ್ಜೆ ಮಾರುಕಟ್ಟೆಯ ಕ್ಯೂರಿಯೊ ಷಾಪ್‌ಗಳು / ಎಂಪೋರಿಯಂಗಳನ್ನು ನಡೆಸುತ್ತಿರುವ ವ್ಯಕ್ತಿಗಳಿಂದ ಅಭಿವ್ಯಕ್ತಿ ಸೂಚಿಸುವ ಬಗ್ಗೆ ಈ ಮೂಲಕ ಆಹ್ವಾನ ನೀಡಲಾಗಿದೆ.

ಆಸಕ್ತ ವ್ಯಕ್ತಿಗಳು ಸ್ಥಳಕ್ಕೆ ಭೇಟಿ ನೀಡಿ ವಿವರವಾದ ಪ್ರಸ್ತಾವನೆಗಳನ್ನು ಕಾರ್ಯನಿರ್ವಾಹಕ ನಿರ್ದೇಶಕರಿಗೆ ದಿನಾಂಕ: 28.6.2006ಕ್ಕೆ ಮುಂಚಿತವಾಗಿ ತಲುಪಿಸತಕ್ಕದ್ದು. ವಿವರಗಳಿಗೆ / ಸ್ಪಷ್ಟೀಕರಣಗಳಿಗೆ ಅವರನ್ನು ದೂರವಾಣಿ ಸಂಖ್ಯೆ 080-7828540, 7828300 ರಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು,
ಪಿ.ಡಿ. 63 ಬನ್ನೇರುಘಟ್ಟ ಬಯೋಲಾಜಿಕಲ್ ಪಾರ್ಕ್

**ಕೃಷಿ ಇಲಾಖೆ**

**ನಿರ್ದೇಶಕರು (ಕೀ.ನಿ.ಪ್ರ) ಶೇಷಾದ್ರಿ ರಸ್ತೆ, ಬೆಂಗಳೂರು-1**

**ಪ್ರಕಟಣೆ**

**ಸಂಖ್ಯೆ/ಉಕೃನಿ/ಕೀನಿಪ್ರ/ಜಡವಸ್ತು/ಅನುಪಯುಕ್ತ/05-06, ದಿನಾಂಕ: 30ನೇ ಮೇ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಉಪ ಕೃಷಿ ನಿರ್ದೇಶಕರು (ಕೀ.ನಿ.ಪ್ರ) ಶೇಷಾದ್ರಿ ರಸ್ತೆ, ಬೆಂಗಳೂರು-1, ಕಛೇರಿಗೆ ಸೇರಿದ ಅನುಬಂಧ-1 ರಲ್ಲಿ ನಮೂದಿಸಲಾದ ಅನುಪಯುಕ್ತ ಜಡವಸ್ತುಗಳನ್ನು ಪೀಠೋಪಕರಣ ಹಾಗೂ ಪ್ರಯೋಗಾಲಯದ ಅನುಪಯುಕ್ತ ಉಪಕರಣಗಳನ್ನು ಹಾಲಿ ಇರು ಸ್ಥಿತಿಯಲ್ಲಿಯೇ ದಿನಾಂಕ: 14.7.2006 ರಂದು ಅಪರಾಹ್ನ 3 ಗಂಟೆಗೆ ಈ ಕಛೇರಿ ಆವರಣದಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಲಾಟ್‌ವಾರು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇ ಮಾಡಲಾಗುವುದು (ವಿವರಗಳಿಗೆ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದು)

ಉಪ ಕೃಷಿ ನಿರ್ದೇಶಕರು,
ಪಿ.ಆರ್. 308 (ಕೀಟನಾಶಕ ನಿಯಂತ್ರಣ ಪ್ರಯೋಗಶಾಲೆ)
ಶೇಷಾದ್ರಿರಸ್ತೆ, ಬೆಂಗಳೂರು-1.

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ), ಸಣ್ಣ ನೀರಾವರಿ ವಿಭಾಗ ವಿಜಾಪೂರ**

**ಟೆಂಡರ್ ಅವಧಿ ವಿಸ್ತರಣೆ**

**ಕ್ರ.ಸಂ: ಕಾನಿಅ:ಸನೀವಿ:ಬಿಜೆಪಿ:2006-07:987, ದಿನಾಂಕ: 11ನೇ ಮೇ 2006**

**ವಿಷಯ:** ಇಂಡಿ ತಾಲ್ಲೂಕಿನ ಇಂಚಗೇರಿ ಹತ್ತಿರ ಜಿಗಜೀವಣಗಿ ಸೈಟ್-2 ಸಣ್ಣ ನೀರಾವರಿ ಕೆರೆ ಕಾಮಗಾರಿಯ ಟೆಂಡರ್ ಕುರಿತು.

**ಉಲ್ಲೇಖ:**
1. ಈ ಕಛೇರಿ ಟೆಂಡರ್ ಪ್ರಕಟಣೆ ಸಂ:412.ದಿ:23.2.2006.
2. ಈ ಕಛೇರಿ ಅವಧಿ ವಿಸ್ತರಣೆ ಪ್ರಕಟಣೆ ಸಂ:638.ದಿ:23.3.2006.
3. ಈ ಕಛೇರಿ ಅವಧಿ ವಿಸ್ತರಣೆ ಪ್ರಕಟಣೆ ಸಂ:687.ದಿ:29.3.2006.
4. ಈ ಕಛೇರಿ ಅವಧಿ ವಿಸ್ತರಣೆ ಪ್ರಕಟಣೆ ಸಂ:803.ದಿ:10.4.06.

ಮೇಲ್ಕಂಡ ಕಾಮಗಾರಿಗಳ ಟೆಂಡರನ್ನು ಉಲ್ಲೇಖಿತ ಪತ್ರದನ್ವಯ ಆಹ್ವಾನಿಸಲಾಗಿದ್ದು, ಟೆಂಡರ್ ದಿನಾಂಕಗಳು ಈ ಕೆಳಗಿನಂತೆ ವಿಸ್ತರಿಸಲಾಗಿದೆ.

1) ಟೆಂಡರ್‌ಗಾಗಿ (ಇಎಂಡಿಯೊಂದಿಗೆ) ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: 16.6.06.
2) ಖಾಲಿ ಟೆಂಡರ್ ಶೆಡ್ಯೂಲ್ ಕೊಡುವ ದಿನಾಂಕ: 23.6.2006.
3) ಭರ್ತಿ ಮಾಡಿದ ಮೊಹರಬಂದ ಟೆಂಡರ್ ಸಲ್ಲಿಸುವ ದಿ:28.6.2006.

ಇತರ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಕೆ.ಆರ್. ಕುಲಕರ್ಣಿ**
ಪಿ.ಆರ್. 309 ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ವಿಜಾಪೂರ.

**ಕರ್ನಾಟಕ ವಿಧಾನ ಸಭೆ**

**ಟೆಂಡರ್ ಪ್ರಕಟಣೆ**

ಕ್ರಮ ಸಂಖ್ಯೆ:ವಿಸಸ/ಕಾಕಾ(ಉ)/42/ಮಿವಾಖ/2006, ಬೆಂಗಳೂರು, ದಿನಾಂಕ:30ನೇ ಮೇ 2006

ಕರ್ನಾಟಕ ವಿಧಾನ ಸಭೆಯ ಸಚಿವಾಲಯದ (ಶಾಸಕರ ಭವನವೂ ಒಳಗೊಂಡಂತೆ) ವ್ಯಾಪ್ತಿಯಲ್ಲಿ ಬರುವ ಪೀಠಾಸೀನಾಧಿಕಾರಿಗಳ ಕಛೇರಿ ಮತ್ತು ಸಮಿತಿ ಸಭೆಗಳ ಉಪಯೋಗಕ್ಕಾಗಿ ಐ.ಎಸ್.ಐ ಗುಣಮಟ್ಟದ ಮಿನರಲ್ ವಾಟರನ್ನು ಕ್ಯಾನುಗಳಲ್ಲಿ ಆಗಿಂದಾಗ್ಗೆ ಅಗತ್ಯಕ್ಕೆ ತಕ್ಕ ಪ್ರಮಾಣದಲ್ಲಿ ಖರೀದಿಸಲು ಉದ್ದೇಶಿಸಲಾಗಿದೆ. ಈ ಸಂಬಂಧ ಮಿನರಲ್ ವಾಟರನ್ನು

ಕ್ಯಾನುಗಳಲ್ಲಿ ಸರಬರಾಜಿಗಾಗಿ ಒಂದು ವರ್ಷದ ಅವಧಿಗೆ ಐ.ಎಸ್.ಐ ದೃಢೀಕರಣ ಹೊಂದಿರುವ ಸಂಸ್ಥೆಯವರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಇಚ್ಛೆಯುಳ್ಳವರು ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆಯ ಸಚಿವಾಲಯ, (ಲೆಕ್ಕಪತ್ರ ಶಾಖೆ), ಕೊಠಡಿ ಸಂಖ್ಯೆ.129, ಮೊದಲನೇ ಮಹಡಿ, ವಿಧಾನಸೌಧ, ಬೆಂಗಳೂರು, ಇಲ್ಲಿ ರೂ.100-00 + ಶೇಕಡ 12.50 ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀದಿಯನ್ನು ಪಡೆದು ನಂತರ ಟೆಂಡರ್ ನಮೂನೆಯನ್ನು ಉಪ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ (ಕಾರ್ಯಕಾರಿ ಶಾಖೆ), ಕೊಠಡಿ ಸಂಖ್ಯೆ.127.ಎ, ಇಲ್ಲಿ ರಸೀದಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿನಾಂಕ 30.06.06ರಂದು ಮಧ್ಯಾಹ್ನ 1-30 ಗಂಟೆಯವರೆಗೆ ಟೆಂಡರ್ ಫಾರಂಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಮೊಹರಾದ ಟೆಂಡರ್‌ಗಳನ್ನು ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ, ಕೊಠಡಿ ಸಂಖ್ಯೆ.228, ಎರಡನೇ ಮಹಡಿ, ವಿಧಾನಸೌಧ, ಬೆಂಗಳೂರು-560 001, ಇವರಿಗೆ ದಿನಾಂಕ 01.07.06ರಂದು ಸಂಜೆ 4-00 ಗಂಟೆಯೊಳಗಾಗಿ ಸಲ್ಲಿಸಬಹುದಾಗಿದೆ. ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ 03.07.06 ರಂದು ಸಂಜೆ 3-00 ಗಂಟೆಗೆ ಪ್ರಧಾನ ಕಾರ್ಯದರ್ಶಿಯವರ ಕೊಠಡಿ ಸಂಖ್ಯೆ.228ರಲ್ಲಿ ತೆರೆಯಲಾಗುವುದು. ನಿಗದಿತ ಟೆಂಡರ್ ದಿನಾಂಕದಂದು ಆಕಸ್ಮಿಕವಾಗಿ ಸಾರ್ವತ್ರಿಕ ರಜೆ ಎಂದು ಘೋಷಿಸಲ್ಪಟ್ಟಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

**ಟೆಂಡರ್ ಷರತ್ತುಗಳು ಕೆಳಕಂಡಂತಿವೆ:-**

1. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿಯೇ ಸಲ್ಲಿಸತಕ್ಕದ್ದು.
2. ಟೆಂಡರ್‌ದಾರರು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ1999 ಮತ್ತು ನಿಯಮಗಳು 2000ರ ಅನ್ವಯ ದ್ವಿಲಕೋಟೆ ಪದ್ದತಿಯಲ್ಲಿ ತಮ್ಮ ದರಗಳನ್ನು ಏಕ ಕಾಲಕ್ಕೆ ಅರಗು ಮೊಹರು ಮಾಡಿದ ಲಕೋಟೆಗಳಲ್ಲಿ ಸಲ್ಲಿಸತಕ್ಕದ್ದು. ಅರಗು ಮೊಹರಾದ ಒಂದನೇ ಲಕೋಟೆಯಲ್ಲಿ ಮುಂಗಡ ಹಣ (ಇ.ಎಂ.ಡಿ) ಠೇವಣಿ ಹಾಗೂ ಟೆಂಡರನ್ನು ಕೈಗೊಳ್ಳಲು ತಮಗಿರುವ ಸಾಮರ್ಥ್ಯದ ವಿವರಗಳಿರುವ ದಾಖಲಾತಿಗಳು ಇರತಕ್ಕದ್ದು. ಅರಗು ಮಾಡಿದ 2ನೇ ಲಕೋಟೆಯಲ್ಲಿ ನಿಗದಿತ ನಮೂನೆಯ ಫಾರಂಗಳಲ್ಲಿ ಇತರೆ ವಿವರಗಳೊಂದಿಗೆ ದರವನ್ನು ಅಂಕಿಯಲ್ಲಿ ಹಾಗೂ ದಪ್ಪ ಅಕ್ಷರಗಳಲ್ಲಿ ನಮೂದಿಸಿ ಸಲ್ಲಿಸತಕ್ಕದ್ದು.
3. ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ "ಮಿನರಲ್ ವಾಟರನ್ನು ಕ್ಯಾನುಗಳಲ್ಲಿ ಸರಬರಾಜು ಮಾಡಲು ದರಪಟ್ಟಿ" ಎಂದು ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆ, ದಿನಾಂಕ ಕಡ್ಡಾಯವಾಗಿ ಬರೆಯತಕ್ಕದ್ದು. ಟೆಂಡರ್ ಸಲ್ಲಿಸುವ ಮೊದಲನೇ ಲಕೋಟೆಯ ಮೇಲೆ "ಇ.ಎಂ.ಡಿ ಹಾಗೂ ಅವಶ್ಯಕ ದಾಖಲಾತಿಗಳ ಲಕೋಟೆ-1" ಎಂದು ನಮೂದಿಸತಕ್ಕದ್ದು. ಟೆಂಡರ್ ಸಲ್ಲಿಸುವ 2ನೇ ಲಕೋಟೆಯ ಮೇಲೆ "ದರ ಸೂಚಿಸುವ ಲಕೋಟೆ-2 ಎಂದು ನಮೂದಿಸತಕ್ಕದ್ದು". ಮೊದಲು ಲಕೋಟೆ-1ನ್ನು ತೆರೆಯಲಾಗುವುದು. ಟೆಂಡರ್‌ದಾರನು ಟೆಂಡರನ್ನು ನಿರ್ವಹಿಸಲು ಅರ್ಹನೆಂದು ಇದರಿಂದ ಕಂಡುಬಂದರೆ ಮಾತ್ರ ಲಕೋಟೆ-2ನ್ನು ತೆರೆಯಲಾಗುವುದು.
4. ಟೆಂಡರ್‌ನಲ್ಲಿ ಭಾಗವಹಿಸುವ ಟೆಂಡರ್‌ದಾರರು ಈ ಕ್ಷೇತ್ರದಲ್ಲಿ ತಮಗಿರುವ ಅನುಭವ, ಪ್ರಸ್ತುತ ಮಿನರಲ್ ವಾಟರ್ ಸರಬರಾಜು ಮಾಡುತ್ತಿರುವ ಇಲಾಖೆ, ಕಛೇರಿ ವಿವರಗಳನ್ನು ದಾಖಲೆಗಳೊಂದಿಗೆ ಒದಗಿಸುವುದು.
5. ಟೆಂಡರ್ ಅರ್ಜಿಯ ಜೊತೆ ಮುಂಗಡ ಠೇವಣಿ ಮೊತ್ತ ರೂ.12500-00 ಗಳನ್ನು ರಾಷ್ಟ್ರೀಕೃತ ಷೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ ಡಿ.ಡಿಯ ಮೂಲಕ ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ, ಬೆಂಗಳೂರು-560 001, ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು. ಮುಂಗಡ ಠೇವಣಿಯನ್ನು ಡಿಮಾಂಡ್ ಡ್ರಾಫ್ಟ್ ಮೂಲಕ ಸಲ್ಲಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರು ಅವರು ಸಲ್ಲಿಸುವ ಟೆಂಡರ್‌ನಲ್ಲಿ ಅವರ ಪೂರ್ಣ ಹೆಸರನ್ನು ನಮೂದಿಸಿ ಸಹಿ ಹಾಕಿರತಕ್ಕದ್ದು. ಅದು ಒಂದು ಸಂಸ್ಥೆಯ ಪರವಾಗಿದ್ದಲ್ಲಿ ಆ ಸಂಸ್ಥೆಯ ಮಾಲೀಕ ಅಥವಾ ಅವರಿಂದ ನಾಮನಿರ್ದೇಶನ ಮಾಡಲ್ಪಟ್ಟ ವ್ಯಕ್ತಿಯ ಹೆಸರಿನೊಂದಿಗೆ ಸಹಿ ಹಾಕತಕ್ಕದ್ದು.

7. ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
8. ನಮೂದಿಸಿರುವ ದರವು ತೆರಿಗೆ, ಸಾಗಾಣಿಕೆ ಇತ್ಯಾದಿಗಳನ್ನು ಒಳಗೊಂಡಿರಬೇಕು.
9. ಯಾವ ಗುತ್ತಿಗೆದಾರರ ಟೆಂಡರ್ ಅಂಗೀಕರಿಸಲ್ಪಟ್ಟಿದೆಯೋ ಅಂತಹ ಗುತ್ತಿಗೆದಾರರಿಗೆ ಒಂದು ವರ್ಷದ ಅವಧಿಗೆ ಐ.ಎಸ್.ಐ ಗುಣಮಟ್ಟದ ಮಿನರಲ್ ವಾಟರ್ ಸರಬರಾಜು ಮಾಡಲು ಪರವಾನಗಿ ನೀಡಲಾಗುವುದು. ಅಂತಹ ಗುತ್ತಿಗೆದಾರರಿಗೆ ನೀಡಲಾಗುವ ತಿಳುವಳಿಕೆ ಪತ್ರದಲ್ಲಿ ನಿಗದಿಪಡಿಸಿರುವ ಅವಧಿಯೊಳಗಾಗಿ ಟೆಂಡರ್ ಕರಾರು ಮಾಡಿಕೊಳ್ಳಲು ಅಗತ್ಯ ದಾಖಲಾತಿಗಳೊಂದಿಗೆ ಹಾಜರಾಗಿ ಕರಾರು ಮಾಡಿಕೊಳ್ಳುವುದು. ತಪ್ಪಿದಲ್ಲಿ ಅಂತಹವರ ಟೆಂಡರನ್ನು ತಿರಸ್ಕರಿಸಲಾಗುವುದು. ಅಲ್ಲದೆ ಅವರ ಮುಂಗಡ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಯಶಸ್ವಿ ಟೆಂಡರ್‌ದಾರರು ಕರಾರಿನ ಒಂದು ವರ್ಷದ ಅವಧಿ ಮುಗಿದ ನಂತರ ಮುಂದಿನ ಸಾಲಿನ ಟೆಂಡರ್ ಪ್ರಕ್ರಿಯೆ ಮುಗಿಯುವವರೆಗೂ, ಸುಮಾರು 3 ತಿಂಗಳವರೆಗೂ ಕರಾರಿನ ದರದಲ್ಲೇ ಮಿನರಲ್ ವಾಟರ್ ಒದಗಿಸಲು ಬದ್ಧರಾಗಿರಬೇಕು.
10. ಯಶಸ್ವಿ ಟೆಂಡರ್‌ದಾರರು ಕರಾರು ಪತ್ರವನ್ನು ಸಲ್ಲಿಸುವ ಮೊದಲು ಟೆಂಡರ್ ಮೊತ್ತದ ಶೇ 10 ರಷ್ಟು ಭದ್ರತಾ ಠೇವಣಿಯನ್ನು ಬ್ಯಾಂಕ್ ಡ್ರಾಫ್ಟ್ ಮೂಲಕ ಅಥವಾ ಬ್ಯಾಂಕ್ ಗ್ಯಾರಂಟಿ ಮೂಲಕವಾಗಲಿ ನೀಡತಕ್ಕದ್ದು. (ಇದರಲ್ಲಿ ಮುಂಗಡ ಠೇವಣಿಯನ್ನು ಸೇರಿಸಬಹುದಾಗಿದೆ).
11. ಅಯಶಸ್ವಿ ಟೆಂಡರ್‌ದಾರರು ಸಲ್ಲಿಸಿದ ಇ.ಎಂ.ಡಿ ಹಣವನ್ನು ಟೆಂಡರ್ ಪ್ರಕ್ರಿಯೆ ಮುಗಿದ ನಂತರ ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
12. ಯಶಸ್ವಿ ಟೆಂಡರ್‌ದಾರನು ಸರಬರಾಜು ಮಾಡುವ ನೀರಿನ ಗುಣಮಟ್ಟದಲ್ಲಿ ಯಾವುದೇ ನ್ಯೂನತೆ ಕಂಡುಬಂದಲ್ಲಿ ಯಾವುದೇ ಸೂಚನೆ ನೀಡದೆ ಅಂದಿನಿಂದಲೇ ಗುತ್ತಿಗೆದಾರರೊಂದಿಗೆ ಮಾಡಿಕೊಂಡ ಕರಾರನ್ನು ಏಕಪಕ್ಷೀಯವಾಗಿ ರದ್ದುಪಡಿಸಲಾಗುವುದು.
13. ಟೆಂಡರ್ ವಿಷಯದಲ್ಲಿ ವಿವಾದ ಉಂಟಾದಲ್ಲಿ ಕರ್ನಾಟಕ ವಿಧಾನ ಮಂಡಲದ ಪ್ರಧಾನ ಕಾರ್ಯದರ್ಶಿ, ಇವರ ತೀರ್ಮಾನ ಅಂತಿಮವಾಗಿರುತ್ತದೆ.
14. ಮಿನರಲ್ ವಾಟರ್ ಸರಬರಾಜು ಮಾಡುವುದಕ್ಕಾಗಿ ಯಾವುದೇ ಸಾರಿಗೆ ಹಾಗೂ ಇತರೆ ವೆಚ್ಚವನ್ನು ಪಾವತಿಸಲಾಗುವುದಿಲ್ಲ.
15. ಯಾವುದೇ ಕಾರಣಗಳನ್ನು ನೀಡದೆ ಅಥವಾ ಎಲ್ಲಿ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ವಿಧಾನ ಮಂಡಲದ ಪ್ರಧಾನ ಕಾರ್ಯದರ್ಶಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ತೀರ್ಮಾನವೇ ಅಂತಿಮವಾದದ್ದು.
16. ಹೆಚ್ಚಿನ ವಿವರಗಳನ್ನು ಅಪರ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು, ಅಥವಾ ಉಪ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಕೊಠಡಿ ಸಂಖ್ಯೆ.127.ಎ, ವಿಧಾನಸೌಧ, ಬೆಂಗಳೂರು-560 001, ಇವರ ಕಛೇರಿಯಲ್ಲಿ ಕೆಲಸದ ದಿನಗಳಲ್ಲಿ ಪಡೆಯಬಹುದಾಗಿರುತ್ತದೆ.

**ಕೆ.ಚಿನ್ನಸ್ವಾಮಿ**

ಪಿ.ಆರ್. 311

ಉಪ ಕಾರ್ಯದರ್ಶಿ,

ಕರ್ನಾಟಕ ವಿಧಾನ ಸಭೆಯ ಸಚಿವಾಲಯ.

**ಲೋಕೋಪಯೋಗಿ ಇಲಾಖೆ (ರಾಷ್ಟ್ರೀಯ ಹೆದ್ದಾರಿಗಳು)**

**ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರರವರ ಕಚೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ**

**ಟೆಂಡರ್ ಅಧಿಸೂಚನೆ**

**(ದ್ವಿ ಲಕೋಟೆ ಪದ್ಧತಿ)**

**ಸಂ.:ಹೆಆಕಾನಿಇಂ:ರಾಹೆವಿ:ಕಾ:ಎ೪:ಎನ್‌ಐಟಿ:2006-07:202, ದಿನಾಂಕ: 20ನೇ ಮೇ 2006**

ಈ ಮುಂದೆ ತಿಳಿಸಿರುವ ಕಾಮಗಾರಿಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ರಂತೆ ಮೊಹರು ಮಾಡಿದ ಬಾಬ್ತುವಾರು ಟೆಂಡರುಗಳನ್ನು ನಿಗದಿಪಡಿಸಿರುವ ಸ್ವರೂಪದ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ 1ನೇ ದರ್ಜೆ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ದರ ಸಲ್ಲಿಕೆಯ ವ್ಯವಸ್ಥೆಯ 'ತಾಂತ್ರಿಕ ಬಿಡ್' ಮತ್ತು 'ಆರ್ಥಿಕ ಬಿಡ್' ಇರುತ್ತದೆ. ದರಗಳನ್ನು ಎರಡು ಭಾಗಗಳಲ್ಲಿ ಎರಡು ಪ್ರತ್ಯೇಕ ಮೊಹರು ಮಾಡಿರುವ ಲಕೋಟೆಗಳಲ್ಲಿ 'ತಾಂತ್ರಿಕ ಬಿಡ್' ಮತ್ತು 'ಆರ್ಥಿಕ ಬಿಡ್' ಎಂದು ಗುರುತು

ಮಾಡಿರುವುದನ್ನು ಸ್ವೀರಿಸಲಾಗುವುದು. ಈ ಎರಡೂ ಲಕೋಟೆಗಳನ್ನು ಮತ್ತೊಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿ ಕಾಮಗಾರಿಯ ಹೆಸರು ಮೇಲ್ಬರಹವಾಗಿ ಬರೆದು ಈ ಕೆಳಗೆ ಸಹಿ ಮಾಡಿರುವವರ ವಿಳಾಸಕ್ಕೆ ಬರೆಯಬೇಕು, ಮತ್ತು ಬಿಡ್ದುದಾರರ ಹೆಸರು ಮತ್ತು ಪೂರ್ಣ ಅಂಚೆ ವಿಳಾಸವನ್ನು ಬರೆದಿರಬೇಕು. ಪೂರ್ಣಗೊಳಿಸಿದ ಟೆಂಡರ್ ಸಲ್ಲಿಕೆಯನ್ನು ಅಧೀಕ್ಷಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವೃತ್ತ, ಧಾರವಾಡ ಇವರ ಕಚೇರಿಯಲ್ಲಿ ಅಥವಾ ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಕಚೇರಿಯಲ್ಲಿ ಈ ಕೆಳಗೆ ಸಹಿ ಮಾಡಿರುವವರು ದಿನಾಂಕ:28.6.2006ರ ಅಪರಾಹ್ನ 4-00 ಗಂಟೆ (ಐಎಸ್‌ಟಿ) ವರೆಗೆ ಸ್ವೀಕರಿಸುವರು. ಇದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ರಂತೆ ಮತ್ತು ಕರ್ನಾಟಕ ಲೋಕೋಪಯೋಗಿ ಇಲಾಖೆ ಕಾಯಿದೆ ಸಂಪುಟ-11ರ ಪಿಡಬ್ಲ್ಯುಜಿ-65 ಮತ್ತು 66 ರಲ್ಲಿ ಗೊತ್ತುಪಡಿಸಿರುವ ನಿಯಮಗಳಲ್ಲಿ ಒಳಪಟ್ಟಿರುತ್ತದೆ. ತಾಂತ್ರಿಕ ಬಿಡ್‌ನ್ನು ಈ ಕೆಳಗೆ ಸಹಿ ಮಾಡಿರುವವರು ಕೆಳಗೆ ನಮೂದಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಕಚೇರಿಯಲ್ಲಿ ತೆರೆಯುವರು. ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದವರ ಆರ್ಥಿಕ ಬಿಡ್ಡ್‌ನ್ನು ಮಾತ್ರ ತೆರೆಲಾಗುವುದು. ಮುಂದೆ ತಿಳಿಸಿರುವ ದಿನಾಂಕಗಳಲ್ಲಿ ಯಾವುದಾದರೂ ಸಾರ್ವತ್ರಿಕ ರಜಾ ದಿನವಾದರೆ ಮುಂದಿನ ಅನುಕೂಲಕರ ಕೆಲಸದ ದಿನವನ್ನು ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಡಲಾದ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ ತೆರಿಗೆಗಳು ಸೇರಿದಂತೆ ರೂ. ಗಳಲ್ಲಿ (ಹಿಂದಿರುಗಿಸಲಾಗುವುದಿಲ್ಲ) | ಕಾಮಗಾರಿಯ ಸ್ವರೂಪ | ಕಾಮಗಾರಿಗೆ ನಿಗದಿಪಡಿಸಲಾದ ಕಾಲಮಿತಿ ಮಳೆಗಾಲ ಸಹಿತ) |
|---|---|---|---|---|---|---|
| 1. | ರಾಹೆ-17ರ ಪಣಜಿ ಮಂಗೂರ ರಸ್ತೆಯ ಕಿರು ಸೇತುವೆ ನಂ.:142/4 (ಕಿ. ಮೀ. 141.440) ನ್ನು ಮರು ನಿರ್ಮಾಣ ಮಾಡುವ ಕಾಮಗಾರಿ. | 97,95,210-00 | 97,960-00 | 10,000/- + 2.5% VAT | ಕಿರು ಸೇತುವೆ | 11 ತಿಂಗಳು |
| 2. | ರಾಹೆ-17ರ ಪಣಜಿ - ಮಂಗಳೂರ ರಸ್ತೆಯ ಕಿ.ಮೀ. 164.150 ರಿಂದ 165.500 ವರೆಗೆ ಜ್ಯಾಮೆಟ್ರೀಕ್ ಅಭಿವೃದ್ಧಿ ಹಾಗೂ ಕಿರು ಸೇತುವೆ ನಂ.: 165/5 (ಕಿ.ಮೀ. 164.985) ನ್ನು ಮರು ನಿರ್ಮಾಣ ಮಾಡುವ ಕಾಮಗಾರಿ. | 1,93,75,087-00 | 1,93,800-00 | 20,000/- + 12.5% VAT | ಕಿರು ಸೇತುವೆ | 11 ತಿಂಗಳು |

**ಷರತ್ತುಗಳು:**

ಕಾಮಗಾರಿಗೆ ಸಲ್ಲಿಸಲು ಅಪೇಕ್ಷಿಸುವ ಗುತ್ತಿಗೆದಾರರು ಟೆಂಡರ್ ಪತ್ರದ ಬೆಲೆಯನ್ನು ನಗದಾಗಿ ಅಥವಾ ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದಾರಿ ವಿಭಾಗ, ಕಾರವಾರ ಇವರ ಪರವಾಗಿ ಪಡೆದು ಕಾರವಾರದಲ್ಲಿ ಪಾವತಿಯಾಗುವ ನಗದಾಗಿ ಅಥವಾ ಡಿ.ಡಿ. ಸ್ವರೂಪದಲ್ಲಿ ಸಲ್ಲಿಸಿ ಅರ್ಜಿಯೊಂದಿಗೆ ಕೆಳಗೆ ಸಹಿ ಮಾಡಿದವರ ಕಚೇರಿಯಲ್ಲಿ ಸಲ್ಲಿಸಬೇಕು. ಅರ್ಜಿಯನ್ನು ಸಲ್ಲಿಸುವಾಗ ಅರ್ಜಿಯ ಜೊತೆಗೆ ನೊಂದಣಿ ಸಾಕ್ಷ್ಯಾಧಾರ ಇತ್ತೀಚಿನವರೆಗೆ ಆದಾಯ ತೆರಿಗೆಯಿಂದ ಮುಕ್ತವಾಗಿರುವ ಯೋಗ್ಯತಾ ಪತ್ರ ಮತ್ತು ಇದೇ ಸ್ವರೂಪದ ಕಾಮಗಾರಿ ನಿರ್ವಹಿಸಿರುವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದು ಅರ್ಜಿದಾರರು ಸಲ್ಲಿಸಬೇಕು. ಹಾಗೆ ಮಾಡದೇ ಇದ್ದಲ್ಲಿ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ. ಅರ್ಹತಾ ಪತ್ರವನ್ನು ಕಾರ್ಯನಿರ್ವಾಹಕ ಇಂಜಿನೀಯರರ ಹುದ್ದೆಯ ತತ್ಸಮ ದರ್ಜೆಯ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದಿರಬೇಕು.

2. ಟೆಂಡರ್‌ಗೆ ಅರ್ಜಿ ಸಲ್ಲಿಸಲು ಖಾಲಿ ಟೆಂಡರ್ ಫಾರಂಗಳನ್ನು ಪಡೆಯಲು ಹಾಗೂ ಮೊಹರಾದ ಟೆಂಡರ್‌ಗಳನ್ನು ಪಡೆಯುವ ದಿನಾಂಕಗಳು ಈ ಕೆಳಕಂಡಂತಿವೆ.

1) ಖಾಲಿ ಟೆಂಡರ್ ಫಾರಂಗಳನ್ನು ಪಡೆಯುವುದಕ್ಕೆ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ - 27.6.2006
2) ಮೋಹರಾದ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ: ಸಂಜೆ 4-00 ಗಂಟೆಯವರೆಗೆ - 28.6.2006
3) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ ಬೆಳಿಗ್ಗೆ 11-00 ಗಂಟೆಗೆ - 29.6.2006

**ತಾಂತ್ರಿಕ ಬಿಡ್ಡಿನ ಷರತ್ತುಗಳು:**

1. ಇ.ಎಂ.ಡಿ. ಯನ್ನು ಎಫ್.ಡಿ.ಆರ್.:ಡಿ.ಡಿ.:ಬ್ಯಾಂಕರ್ಸ್ ಚೆಕ್ (ಬ್ಯಾಂಕ್ ಗ್ಯಾರಂಟಿ ಸ್ವರೂಪದಲ್ಲಿ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದು ಅಥವಾ ಎನ್.ಎಸ್.ಸಿ. ಆಗಿ ಪಡೆದು ಈ ಕೆಳಗೆ ರುಜು ಮಾಡಿರುವವರ ಪರವಾಗಿ ಒತ್ತೆಯಿಟ್ಟು) ಟೆಕ್ನಿಕಲ್ ಬಿಡ್ಡಿಗೆ ಲಗತ್ತಿಸಬೇಕು. ಬ್ಯಾಂಕ್ ಗ್ಯಾರಂಟಿಯು ಟೆಂಡರ್ ಜೊತೆಗೆ ಕೊಟ್ಟಿರುವ ಪಿಡಬ್ಲ್ಯುಜಿ-66ರಲ್ಲಿ ಗೊತ್ತುಪಡಿಸಿರುವಂತೆ ಇರಬೇಕು. ವ್ಯತಿರಿಕ್ತವಾದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು. ಇ.ಎಂ.ಡಿ.ಯ ಸಿಂಧುತ್ವ ಟೆಂಡರ್ ನಿಬಂಧನೆಗಳು ಇತ್ಯಾದಿಗಳಿಗೆ ಸಂಬಂಧಿಸಿದಂತೆ ಪಿಡಬ್ಲ್ಯುಜಿ-66ನ್ನು ಅನುಸರಿಸಬೇಕು. ಮತ್ತು ಅವುಗಳು ಟೆಂಡರ್‌ದಾರರನ್ನು ಬದ್ಧರನ್ನಾಗಿ ಮಾಡುತ್ತದೆ. ಎಲ್ಲಾ ತರಹದ ಇ.ಎಂ.ಡಿ.ಯ ಕಾಲಾವಧಿಯು ಟೆಂಡರ್ ತೆರೆದ ದಿನಾಂಕದಿಂದ 180 ದಿನಗಳಿಗಿರತಕ್ಕದ್ದು. ತಪ್ಪಿದ್ದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
2. ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ನ್ಯೂನತೆಗಳನ್ನು ದುರಸ್ಥಿಪಡಿಸುವ ಅವಧಿಯು ಕಾಮಗಾರಿ ಪೂರ್ಣಗೊಂಡ ದಿನಾಂಕದಿಂದ ಒಂದು ವರ್ಷದವರೆಗೆ ಇರುತ್ತದೆ. ಈ ಅವಧಿಯಲ್ಲಿ ಕೈಗೊಂಡ ಕಾಮಗಾರಿಯಲ್ಲಿ ಯಾವುದೇ ನ್ಯೂನ್ಯತೆಗಳು ಕಂಡು ಬಂದಲ್ಲಿ ಅವುಗಳನ್ನು

ಗುತ್ತಿಗೆದಾರರೇ ಅವರ ಸ್ವಂತ ಖರ್ಚಿನಲ್ಲಿ ದುರಸ್ತಿಪಡಿಸತಕ್ಕದ್ದು. ಈ ಸಂಬಂಧದಲ್ಲಿ ಅವಶ್ಯವಿರುವ ಇ.ಎಂ:ಎಸ್.ಡಿಯನ್ನು ಒದಗಿಸತಕ್ಕದ್ದು.

3. ಪ್ರತಿಯೊಬ್ಬ ಟೆಂಡರುದಾರರು ಈ ಮುಂದೆ ತಿಳಿಸಿರುವ ಯಂತ್ರೋಪಕರಣಗಳನ್ನು ಸ್ವಂತ ಹೊಂದಿರಬೇಕು ಮತ್ತು ಅದರ ಮಾಲೀಕತ್ವದ ಬಗ್ಗೆ ಸಾಕ್ಷ್ಯಾಧಾರಗಳನ್ನು ಈ ಮುಂದೆ ತಿಳಿಸಿರುವಂತೆ ಒದಗಿಸತಕ್ಕದ್ದು.
4. ತಾಂತ್ರಿಕ ಬಿಡ್ ಟೆಂಡರನ್ನು ತೆರೆಯುವ ಸಮಯದಲ್ಲಿ ಯಂತ್ರೋಪಕರಣಗಳ ಹಾಗೂ ಕಾಮಗಾರಿ ಮಾಡಿರುವ ಬಗ್ಗೆ ಪ್ರಮಾಣ ಪತ್ರದ ಮೂಲ ಪ್ರತಿಗಳನ್ನು ಒದಗಿಸತಕ್ಕದ್ದು, ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆ | ಮಾಲೀಕತ್ವದ ಬಗ್ಗೆ |
|---|---|---|---|
| | **ಸೇತುವೆ ಹಾಗೂ ರಸ್ತೆಯ ಕೆಲಸಕ್ಕೆ:** | | |
| 1 | ಕಾಂಕ್ರೀಟ್ ಮಿಕ್ಸರ್ | 2 | ಖರೀದಿಸಿದ ದಾಖಲೆ : ಸೇಲ್ ಡೀಡ್ ಮತ್ತು ಡೀಡ್ ಮಾಡಲಾದ ಮೊದಲಿನ ಖರೀದಿಸಿದ ದಾಖಲೆ. |
| 2 | ವೈಬ್ರೆಟರ್ಸ್ | 2 | - ಸದರ - |
| 3 | ಏಕ್ಸ್ ಕಾವೇಟರ್ (20 ಮೆ. ಖನ್) | 1 | - ಸದರ - |
| 4 | ಹಾಟ್ ಮಿಕ್ಸ್ ಪ್ಲಾಂಟ್ 40/60 ಟಿ.ಪಿ.ಎಚ್. ಅಥವಾ ಹೆಚ್ಚಿನ ಸಾಮರ್ಥ್ಯವಿರುವ (ಎಂ.ಓ.ಆರ್.ಟಿ. ಮತ್ತು ಹೆಚ್. ವಿವರಗಳ ಪ್ರಕಾರ) | 1 | ಖ್ದೀದಿ ಇನ್‌ವಾಯ್ಸ : ಖರೀದಿ ಬಿಲ್ ಮಾರಾಟ ಒಪ್ಪಂದ ಪತ್ರ ಹಾಗೂ ಮಾರಾಟಗಾರರ ಖರೀದಿ ಇನ್‌ವಾಯ್ಸ್ |
| 5 | ಪೇವರ್ ಫಿನಿಷರ್ | 1 | - ಸದರ - |
| 6 | ಸ್ಟಾಟಿಕ್ ರೋಡ' ರೋಲರ್ಸ್ | 2 | - ಸದರ - |
| 7 | ವೈಬ್ರೆಟರ್ ರೋಡ್ ರೋಲರ್ | | - ಸದರ - |
| 8 | ಮೆಕ್ಯಾನಿಕಲ್ ಸ್ಪ್ರೇಯರ್ಸ್ | 2 | - ಸದರ - |
| 9 | ಪಗ್ ಮಿಲ್ | 1 | - ಸದರ - |
| 10 | ಟಿಪ್ಪರ್ಸ್ | 4 | ಆರ್.ಟಿ.ಓ. ರವರಿಂದ ಪಡೆದ ಸರ್ಟಿಫಿಕೇಟನ ನಕಲು |
| 11 | ಸ್ಕ್ಯಾಫೋಲ್ಡಿಂಗ್ ಹಾಗೂ ಸೆಂಟ್ರಿಂಗ್ ಸಲಕರಣೆಗಳು | 1 ಯುನಿಟ್ | - |
| 12 | ಜನರೇಟರ್ | 1 | ಖರೀದಿಸಿದ ದಾಖಲೆ ಸೇಲ್ ಡೀಡ್ ಮತ್ತು ಡೀಡ್ ಮಾಡಲಾದ ಮೊದಲಿನ ಖರೀದಿಸಿದ ದಾಖಲೆ. |
| 13 | ಗುಣ ನಿಯಂತ್ರಣ ಸಲಕರಣೆ ಅಂದರೆ ಸೀವ್ಸ್, ಬಿಟುಮನ್ ಅಕ್ಸ್‌ಟ್ರಕ್ಸ್, ತೂಕದ ಯಂತ್ರ ಹಾಗೂ ತಾಂತ್ರಿಕ ಸಿಬ್ಬಂದಿ ಸಹಿತ ಲ್ಯಾಬರೇಟರಿ. | 1 ಯುನಿಟ್ | - |

5. ಕಳೆದ ಐದು ವರ್ಷಗಳ ಅವಧಿಯಲ್ಲಿ ಟೆಂಡರಿಗೆ ಹಾಕಿರುವ ಮೊಬಲಗಿನ ಶೇ. 30 ರಷ್ಟು ಮೌಲ್ಯದ ಇದೇ ರೀತಿಯ ಕಾಮಗಾರಿಯನ್ನು ಪ್ರತಿ ಟೆಂಡರುದಾರರು ತೃಪ್ತಿಕರವಾಗಿ ಪೂರ್ಣಗೊಳಿಸಿಬೇಕು. (ತಹಲ್‌ವರೆಗೆ ವಾರ್ಷಿಕ ಶೇ. 10 ಲೆಕ್ಕಾಚಾರ ಮಾಡಬಹುದಾಗಿದೆ). ಪರ್ಯಾಯವಾಗಿ ಸದರಿ ವಾರ್ಷಿಕ ಸಾಲಿನಲ್ಲಿ ಇದೇ ತರಹ ಕಾಮಗಾರಿಗೆ ಶೇ. 30 ರಷ್ಟು ಬಿಲ್ಲು ಪಾವತಿ ಆಗಿರುವ ಬಗ್ಗೆ ತಾಂತ್ರಿಕ ಬಿಡ್‌ನಲ್ಲಿ ಸಲ್ಲಿಸಬೇಕು. ಅರ್ಹತಾ ಪತ್ರವನ್ನು ಕಾರ್ಯನಿರ್ವಾಹಕ ಇಂಜಿನೀಯರರ ಹುದ್ದೆಗೆ ಕಡಿಮೆ ಇರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದಿರಬೇಕು.
6. ಆರ್ಥಿಕ ಸಾಮರ್ಥ್ಯದ ಬಗ್ಗೆ ಟೆಂಡರ್‌ಗೆ ಹಾಕಿರುವ ಮೊಬಲಗಿನ ಶೇ. 30 ರಷ್ಟು ಸಮವಾಗಿರುವ ಮೊತ್ತದ ಲೈನ್ ಆಫ್ ಕ್ರೆಡಿಟ್‌ನ್ನು ಯಾವುದೇ ರಾಷ್ಟ್ರೀಕೃತ ಅಥವಾ ಷೆಡ್ಯೂಲ್ಡ್ ಬ್ಯಾಂಕಿನಿಂದ ನಿಗದಿತ ನಮೂನೆಯಲ್ಲಿ ಪಡೆದು ಸಲ್ಲಿಸಬೇಕು. ಈ ಪ್ರಮಾಣ ಪತ್ರವನ್ನು ಸಲ್ಲಿಸದಿದ್ದಲ್ಲಿ ಟೆಂಡರ್ ತಿರಸ್ಕರಿಸಲ್ಪಡುವುದು.
7. ತಾಂತ್ರಿಕ ಬಿಡ್‌ಗೆ ಒತ್ತಾಸೆಯಾಗಿ ಲಗತ್ತಿಸುವ ಎಲ್ಲಾ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ (ಅಂದರೆ ಕಾರ್ಯನಿರ್ವಾಹಕ ಇಂಜಿನಿಯರರ ದರ್ಜೆಗಿಂತ ಕಡಿಮೆ ಇರದ ಅಧಿಕಾರಿಗಳಿಂದ ದೃಢೀಕರಿಸಬೇಕು. ಟೆಕ್ನಿಕಲ್ ಬಿಡ್ಡನ್ನು ತೆರೆಯುವ ದಿನಾಂಕದಂದು ಮೂಲ ಪ್ರತಿಗಳನ್ನು ಪರಿಶೀಲಿಸಲು ಹಾಜರುಪಡಿಸಬೇಕು. ಮೂಲ ಪ್ರತಿಗಳನ್ನು ಒದಗಿಸದೇ ಇದ್ದ ಪಕ್ಷದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
8. ತಾಂತ್ರಿಕ ಬಿಡ್ಡಿನಲ್ಲಿ ಸಂಬಂಧಪಟ್ಟ ದಾಖಲೆಗಳನ್ನು ಮಾತ್ರ ಲಗತ್ತಿಸತಕ್ಕದ್ದು. ಕಂಪನಿ:ಗುತ್ತಿಗೆದಾರ:ಸಂಸ್ಥೆ ವಿವರಗಳನ್ನು ಒದಗಿಸತಕ್ಕದ್ದು.
9. ಷರತ್ತುಳ್ಳ ಟೆಂಡರಗಳನ್ನು ತಿರಸ್ಕರಿಸಲಾಗುವುದು.
10. ಯಾವ ಕಾರಣವನ್ನು ತಿಳಿಸದೇ ಅಥವಾ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸುವ ಹಕ್ಕನ್ನು ಅಧಿಕಾರಯುಕ್ತ ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ.
11. ಜಂಟಿ ಪ್ರಯತ್ನದ ಕಂಪನಿಗಳು ಟೆಂಡರ್‌ನಲ್ಲಿ ಭಾಗವಹಿಸಲು ಅವಕಾಶವಿಲ್ಲ.

ಕಾಮಗಾರಿಯ ಬಗ್ಗೆ ಇತರ ಯಾವುದೇ ವಿವರವನ್ನು ಮೇಲಿನ ಕಛೇರಿಯಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಹೆದ್ದಾರಿ ಆಡಳಿತ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ.

ಪಿ.ಆರ್. 312